

ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ಎಂಫಿಲ್. ಪದವಿಯ ಸಂಪ್ರಬಂಧ

# "ಬಿ.ಎಂ.ಶ್ರೀ. ಪ್ರತಿಷ್ಠಾನದ ಸಂಗ್ರಹದಲ್ಲಿರುವ ಹಸ್ತಪ್ರತಿಗಳ ಲಿಪಿಕಾರರು ಒಂದು ಅಧ್ಯಯನ"

ಸಂಶೋಧನ ವಿಧ್ಯಾರ್ಥಿ

ಮಂಜುನಾಥ.ಡಿ.ಕೆ.

ಮಾರ್ಗದರ್ಶಕರು

ಡಾ॥ ನಾ.ಗೀತಾಚಾರ್ಯ



ಎಂ.ವಿ.ಸಿ.ಸ್ನಾತಕೋತ್ತರ ಸಂಶೋಧನ ಕೇಂದ್ರ

ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ

ಬೆಂಗಳೂರು.




ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ಎಂಫಿಲ್. ಪದವಿಯ ಸಂಪ್ರಬಂಧ

# "ಬಿ.ಎಂ.ಶ್ರೀ. ಪ್ರತಿಷ್ಠಾನದ ಸಂಗ್ರಹದಲ್ಲಿರುವ ಹಸ್ತಪ್ರತಿಗಳ ಲಿಪಿಕಾರರು ಒಂದು ಅಧ್ಯಯನ"

ಸಂಶೋಧನ ವಿಧ್ಯಾರ್ಥಿ

ಮಂಜುನಾಥ.ಡಿ.ಕೆ.

ಮಾರ್ಗದರ್ಶಕರು

ಡಾ॥ ನಾ.ಗೀತಾಚಾರ್ಯ



ಎಂ.ವಿ.ಸಿ.ಸ್ನಾತಕೋತ್ತರ ಸಂಶೋಧನ ಕೇಂದ್ರ

ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ

ಬೆಂಗಳೂರು.

# ಅಭ್ಯರ್ಥಿಯ ಪ್ರಮಾಣ ಪತ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವ ವಿದ್ಯಾಲಯಕ್ಕೆ 2011–2012ನೇ ಸಾಲಿನ ಎಂ.ಫಿಲ್ ಪದವಿಗಾಗಿ **"ಬಿ.ಎಂ.ಶ್ರೀ.ಪ್ರತಿಷ್ಠಾನದ ಸಂಗ್ರಹದಲ್ಲಿರುವ ಹಸ್ತಪ್ರತಿಗಳ ಲಿಪಿಕಾರರು ಒಂದು ಅಧ್ಯಯನ"** ಎಂಬ ಸಂಪ್ರಬಂಧವನ್ನು ಡಾ॥ ನಾ.ಗೀತಾಚಾರ್ಯ ಅವರ ಮಾರ್ಗದರ್ಶನದಲ್ಲಿ ಸಿದ್ದಪಡಿಸಿ ಸಲ್ಲಿಸುತ್ತಿದ್ದೇನೆ.

ಈ ಸಂಪ್ರಬಂಧ ನನ್ನ ಸ್ವಂತ ಬರವಣಿಗೆ ಆಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

**ದಿನಾಂಕ :** 28-06-2012

**ಸ್ಥಳ : ಬೆಂಗಳೂರು**

**ಸಹಿ:–**
ಮಂಜುನಾಥ ಡಿ.ಕೆ

**(ಮಂಜುನಾಥ.ಡಿ.ಕೆ.)**

# ಮಾರ್ಗದರ್ಶಕರ ಪ್ರಮಾಣ ಪತ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ. ಸ್ನಾತಕೊತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ 2011–2012ನೇ ಸಾಲಿನ ಎಂ.ಫಿಲ್ ಪದವಿಗಾಗಿ **"ಬಿ.ಎಂ.ಶ್ರೀಪ್ರತಿಷ್ಠಾನದ ಸಂಗ್ರಹದಲ್ಲಿರುವ ಹಸ್ತಪ್ರತಿಗಳ ಲಿಪಿಕಾರರು ಒಂದು ಅಧ್ಯಯನ"** ಎಂಬ ಸಂಪ್ರಬಂಧವನ್ನು ಮಂಜುನಾಥ.ಡಿ.ಕೆ. ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಈ ಸಂಪ್ರಬಂಧ ವಿದ್ಯಾರ್ಥಿಯ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಬೇರೆಲ್ಲೂ ಪ್ರಕಟಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ಧೃಢೀಕರಿಸುತ್ತೇನೆ.

**ದಿನಾಂಕ :** 28-06-2012

**ಸ್ಥಳ : ಬೆಂಗಳೂರು**

**ಸಹಿ:–**

(ಡಾ॥ ನಾ. ಗೀತಾಚಾರ್ಯ)

ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ
ಬಿ. ಎಂ. ಶ್ರೀ ಕಲಾ ಭವನ,
3ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ
ಬೆಂಗಳೂರು - 560 019

# ಪರಿವಿಡಿ

## ಅಧ್ಯಾಯ – ೧

### ಅ) ಪೀಠಿಕೆ :-

ನಮ್ಮ ಜೀವನಕ್ಕೆ ಸಂಸ್ಕೃತಿಯ ಶ್ರೀಮಂತಿಕೆ ಬಂದುದು ಜ್ಞಾನ ಬಲದಿಂದ. ಈ ಜ್ಞಾನವು ಪ್ರಾಚೀನ ಕಾಲದ ವಾಕ್ಪರಂಪರೆಯಲ್ಲಿ ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ಹರಡುತ್ತಾ ಬಂದುದು ಯಾವುದೋ ಒಂದು ಕಾಲಘಟ್ಟದಲ್ಲಿ ಬರಹರೂಪಕ್ಕೆ ಒಳಪಟ್ಟಿತ್ತು ಅಂದಿನಿಂದ ನಮ್ಮ ಜೀವನದ ಅಭಿವೃದ್ದಿಗೆ, ನಮ್ಮ ಸಂಸ್ಕೃತಿಯ ಬಲ ಸಂವರ್ಧನೆಗೆ ನಮ್ಮ ನಡೆ ನುಡಿಗಳ ಆವಿಷ್ಕಾರಕ್ಕೆ ಲಿಖಿತ ಜ್ಞಾನವು ಹೊಸ ಭೂಮಿಕೆಯನ್ನೇ ತರೆಯಿತು.

ವ್ಯಾಸಮಹರ್ಷಿಗಳಿಂದ ಹೇಳಲ್ಪಟ್ಟ, ಮಹಾಭಾರತ ಕಥೆಯನ್ನು ಲಿಪಿಕಾರನಾದಂತಹ ಗಣಪತಿಯು ಕೊರೆದಂತೆ ಹಸ್ತಪ್ರತಿ ಲಿಪಿಕಾರರು ತಮಗೆ ಗೊತ್ತಿರುವ ವಿವಿಧ ಲಿಪಿಗಳಲ್ಲಿ ವೈವಿಧ್ಯಮಯವಾಗಿ ಲಿಖಿಸಿದ ಜ್ಞಾನ ಸಂಪತ್ತನ್ನು ನೋಡುಗರಿಗೆ ಹಿತ ನೀಡುವಂತೆ ಯಾವುದೇ ಮುದ್ರಣಸೌಕರ್ಯವಿಲ್ಲದಿದ್ದ ಆಕಾಲದಲ್ಲಿಯೇ ಅನೇಕ ಕೃತಿಗಳನ್ನು ಬರೆಯುವುದರ ಮೂಲಕ ಲಿಪಿಕಾರರು ಪ್ರಾಚೀನ ಸಾಹಿತ್ಯ ಜ್ಞಾನ ಭಂಡಾರವನ್ನೇ ಮುಂದಿನ ತಲೆಮಾರಿಗೆ ಬಿಟ್ಟು ಹೋಗಿದ್ದಾರೆ.

ಪ್ರಾಚೀನರ ಜ್ಞಾನ ಸಂಪತ್ತು ಶಾಸನಗಳಲ್ಲಿ, ತಾಳೆಗರಿ–ಹಸ್ತಪ್ರತಿಗಳಲ್ಲಿ ಪ್ರಾಚೀನ ದೇವಾಲಯಗಳ ಗುಹಾಂತರ ಚಿತ್ರಗಳ ಕೆತ್ತನೆಯಲ್ಲಿ ಉಳಿದು ಬಂದಿರುವಂತೆ "ಬಾಯಿಂದ ಬಾಯಿಗೆ ಸಾಗಿ ಬರುತ್ತಿದ್ದ ಸಾಹಿತ್ಯ ಕಾಲಕಳೆದಂತೆ ಗ್ರಂಥಸ್ಥವಾಗಿ ಚಾಕ್ಷುಪ ರೂಪವನ್ನು ಪಡೆಯಲಾರಂಭಿಸಿದ ಮೇಲೆ ಅದರ ಪಾಠಶುದ್ದಿಯ ಹೊಣೆಗಾರಿಕೆ, ಪಠನಕಾರನ ಕೈಯಿಂದ ಜಾರಿ ಲೇಖಕರ ಅಥವಾ ಲಿಪಿಕಾರರ ಹಸ್ತಗತವಾಯಿತು" ೧

ಇಂತಹ ಜ್ಞಾನವನ್ನು ಇಂದಿನ ಸಂದರ್ಭದಲ್ಲಿ ಸುವ್ಯವಸ್ಥಿತವಾಗಿ ಸಂರಕ್ಷಿಸಿ ದಾಖಲಿಸುವುದು ಸಾಕಷ್ಟಿದೆ ಎಂಬುದನ್ನು ಅರಿತ ಪ್ರತಿಕಾರರು ಧಾರ್ಮಿಕ ಹಿನ್ನೆಲೆಯ ಕೃತಿಗಳಿಗೆ ಹೆಚ್ಚು ಮಹತ್ವ ನೀಡಿ ಅವುಗಳನ್ನು ಪ್ರತಿ ಮಾಡುವುದರ ಮೂಲಕ ಸಾಹಿತ್ಯ ರಾಶಿಯನ್ನು ಶ್ರೀಮಂತವಾಗುಳಿಸಿದ್ದಾರೆ. ಮತ್ತು ವಿದೇಶಿಯರಿಂದ ಪಲಾಯನವಾದ ಎಷ್ಟೋ ಕವಿಯ ಮೂಲ ಪ್ರತಿಗಳನ್ನು ನಮ್ಮ ಕುಱಿತೋದದೆಯಿಂ ಕಾವ್ಯ ಪ್ರಯೋಗ ಪರಿಣತಮತಿಗಳಾದ ಜಾನಪದ ಪ್ರತಿಕಾರರು ಮೌಖಿಕವಾಗಿಯೇ ಇಡೀ ಕೃತಿಯನ್ನು ವಾಚಿಸಿ ಮತ್ತೆ ಹಲವಾರು ಪ್ರತಿಗಳನ್ನು ಮಾಡಿ ನಮ್ಮ ನಾಡಿಗೆ ಸಾಂಸ್ಕೃತಿಕ ಸಂಪತ್ತು ಕಡಿಮೆಯಾಗದಿರುವಂತೆ ನೋಡಿಕೊಂಡಿದ್ದಾರೆ.

ರಾಜರುಗಳಿಂದ ಪೋಷಕರಿಂದ , ವಿದ್ಯಾ ಪ್ರೇಮಿಗಳಿಂದ ಒಬ್ಬ ಕವಿಯ ಶ್ರೇಷ್ಠ ಕೃತಿ ಪ್ರತಿಕಾರರಿಂದ ಬೇಡಿಕೆಗಳಿಗನುಗುಣವಾಗಿ ಹಲವಾರು ಪ್ರತಿಗಳಾಗಿ ಓಲೆಗರಿಗಳಲ್ಲೇ ನಕಲುಗೊಳಿಸಲ್ಪಡುತ್ತಿದ್ದವು. ಇಂತಹ

" ಕನ್ನಡ ಹಸ್ತಪ್ರತಿಗಳು ಸಾಹಿತ್ಯ ಸಂಸ್ಕೃತಿಯ ಸೃಷ್ಟಿಶೀಲ ಉತ್ಪನ್ನಗಳು ಹಾಗೂ ಸೃಜನಶೀಲ ವಿಸ್ತರಣೆಗಳು ಕನ್ನಡ ಮನಸ್ಸುಗಳು ತನ್ನ ಲಿಪಿಕಾರ , ಕವಿ, ವಿದ್ವಾಂಸ, ಕೇಳುಗ ಪೋಷಕರ ಮೂಲಕ ಸೃಜಿಸಿಕೊಂಡ ಸಾಹಿತ್ಯ, ಸಂಸ್ಕೃತಿಯ ಮೂರ್ತ ಪ್ರತಿಬಿಂಬಗಳಾಗಿವೆ". ೨

ಅಲ್ಲದೆ ಮನುಷ್ಯನ ಹುಟ್ಟಿನಿಂದ ಅವನ ಜಾತಕ, ಉಪನಯನ, ಋತುಮತಿಯಾಗುವಿಕೆ, ಕಂಕಣ ಕಾರ್ಯ ನಿಧನವಾರ್ತೆ, ಶವಸಂಸ್ಕಾರದ ವರೆಗಿನ ಎಲ್ಲಾ ವಿಚಾರಗಳನ್ನು ಕನ್ನಡ ಹಸ್ತಪ್ರತಿಗಳು ತನ್ನ ಒಡಲಲ್ಲಿ ಅರಗಿಸಿಕೊಂಡಿವೆ.

ಹಸ್ತಪ್ರತಿಗಳೆಂದರೆ ಬರೀ ಓಲೆಗರಿಗಳಷ್ಟೇ ಅವುಗಳಲ್ಲಿ ಏನೂ ಇಲ್ಲವೆಂಬ ಸಂಕುಚಿತ ಮನೋಭಾವನೆಯನ್ನು ಜನಸಾಮಾನ್ಯರು ತಳೆದಿದ್ದರು. ಇದಕ್ಕೆ ಪ್ರತಿಕಾರವೆಂಬಂತೆ ನಮ್ಮ ಚಿತ್ರ ಕಲಾವಿದರೂ ಆದ ಪ್ರತಿಕಾರರು ಇಡೀ ಮಹಾಭಾರತವನ್ನು ಮೊಘಲರ ಇತಿಹಾಸವನ್ನು ಅಡುಗೆ ಶಾಸ್ತ್ರವನ್ನು ಚಿತ್ರಗಳಲ್ಲಿ ಸೆರೆಹಿಡಿದಿರುವುದು. ಓಲೆಗರಿಗಳಲ್ಲಿ ಬರೆದಿರುವ ಭಾಷೆ ಎಲ್ಲರಿಗೂ ಓದಲೂ ಬರುವುದಿಲ್ಲ. ಆದ್ದರಿಂದ ಚಿತ್ರ ನೋಡಿಯಾದರು ವಿಷಯ ಗ್ರಹಿಸಲಿ ಎಂಬ ಉದಾರ ಮನೋಭಾವನೆ ಇವರದಾಗಿತ್ತು.

ಇಂತಹ ಕಲಾತ್ಮಕ ಓಲೆಪ್ರತಿಗಳೂ ವಿದೇಶಿಯಾತ್ರಿಕರ ಕೆಟ್ಟದೃಷ್ಟಿಗೆ ಬಿದ್ದು ವಿದೇಶ ಸೇರಿರುವುದನ್ನೂ ಸಹ ನಾವು ಇಲ್ಲಿ ನೆನೆಯಬಹುದಾಗಿದೆ. ಲಿಪಿಕಾರರು ಪ್ರತಿ ಮಾಡಿದಂತಹ ಓಲೆಪ್ರತಿಗಳು ಎಲ್ಲವೂ ಒಂದಲ್ಲಾ ಒಂದು ರೀತಿಯಲ್ಲಿ ಪ್ರಯೋಜನಕ್ಕೆ ಬರುವಂತವುಗಳೇ ಆಗಿದ್ದು ಇಂತಹ ಹಿರಿಯರು ಗಳಿಸಿಟ್ಟು ಹೋದ ಆಸ್ತಿಯನ್ನು ನಮಗೆ ಬಡತನವೇ ಇರಲಿ ಸಿರಿತನವೇ ಬರಲಿ ನಮ್ಮ ಸ್ವಂತ ಮಕ್ಕಳೋಪಾದಿಯಲ್ಲಿ ಸಂರಕ್ಷಿಸಿ, ಪರಿಷ್ಕರಿಸಿ ಪ್ರಕಟಿಸುವ ಜವಾಬ್ದಾರಿಯು ಕನ್ನಡ ನಾಡಿನ ಜನತೆಯ ಆದ್ಯ ಕರ್ತವ್ಯವಾಗಬೇಕಿದೆ, ಎಂದು ಕವಿಯ ಮೂಲ ಕೃತಿಯನ್ನು ಪ್ರತಿಮಾಡುವುದರ ಜೊತೆ ಜೊತೆಗೇ ತಾವು ನೆಲೆನಿಂತ ಮಣ್ಣಿನ ಇತಿಹಾಸ, ಸಂಸ್ಕೃತಿ, ಭಾಷೆ, ಸಾಹಿತ್ಯಗಳ ಬಗೆಗೆ ವಿಶೇಷ ಬೆಳಕನ್ನು ಚೆಲ್ಲಿದರು.

## ಉದ್ದೇಶ

ಕವಿ ನಿರ್ಮಿತ ಅಥವಾ ಪ್ರತಿಕಾರ ನಿರ್ಮಿತ ಓಲೆಯ ಮೇಲಿನ ಬರವಣಿಗೆಗಳನ್ನು ಸರಿಯಾಗಿ ಸಂರಕ್ಷಣೆ ಮಾಡಿದರೆ ಸಾವಿರಾರು ವರ್ಷಗಳ ಕಾಲ ಬದುಕುಳಿಯುತ್ತವೆ ಎಂಬ ಧೃಢ ನಿರ್ಧಾರದೊಂದಿಗೆ ನಮ್ಮ ಪೂರ್ವಜರು ನಮಗೆ ಬಿಟ್ಟುಹೋಗಿರುವ ಈ ದೈವೀ ಸ್ವರೂಪದ ಪರಂಪರೆಯ ಅಮೂಲ್ಯ ಆಸ್ತಿಯನ್ನು ಸದುಪಯೋಗ ಪಡಿಸಿಕೊಳ್ಳುವುದು ನಮ್ಮ ಮುಖ್ಯ ಉದ್ದೇಶವಾಗಿದೆ.

ಹಸ್ತಪ್ರತಿಗಳ ಸಂಗ್ರಹ ಅವುಗಳ ಸ್ವರೂಪ ವೈವಿಧ್ಯತೆ ಲಿಪಿ, ಲಿಪಿಕಾರ, ಸಾಹಿತ್ಯಿಕ, ಸಾಂಸ್ಕೃತಿಕ ಚಿಂತನೆಗಳನ್ನು ಅಂತರ್ಜಾಲದ ಮೂಲಕ ಅವುಗಳ ಪುನಾರಚನೆಯನ್ನು ಇಂದು ಮಾಡಬೇಕಾಗಿದೆ. ಆಗ ಮಾತ್ರ ನಾವು ಹಿಂದೆ ಹೇಗಿದ್ದೆವು, ನಮ್ಮ ಜ್ಞಾನ ಸಂಪತ್ತು ಎಷ್ಟಿತ್ತು ಎಂಬುದನ್ನು ಅಮೂಲ್ಯ ಗ್ರಂಥಗಳ ಸಹಾಯದಿಂದ ತಿಳಿಯಲು ಸಾಧ್ಯ.

ಪ್ರತಿಯೊಂದು ಹಸ್ತಪ್ರತಿಯ ಹಿಂದೆ ಅಡಗಿರುವ ಅದರ ಚರಿತ್ರೆಯನ್ನು ಅವುಗಳ ಪರೀಕ್ಷೆಯಿಂದ ಹೊರಬರುವ ವಾಸ್ತವಾಂಶಗಳನ್ನು ಸಂಗ್ರಹಿಸಿ ಅವುಗಳನ್ನು ಹೇಗೆ ಉಪಯೋಗಿಸಿಕೊಳ್ಳಬಹುದೆಂಬುದನ್ನು ವಿಚಾರ ಮಾಡಬೇಕಾಗಿದೆ.

ಎಂ.ವಿ.ಸೀತಾರಾಮಯ್ಯನವರ ಅಭಿಪ್ರಾಯದಂತೆ "ಬಿ.ಎಂ.ಶ್ರೀ.ಪ್ರತಿಷ್ಠಾನವನ್ನು ಒಂದು ಕೇಂದ್ರ ಹಸ್ತಪ್ರತಿ ಭಂಡಾರವನ್ನಾಗಿ ಮಾಡಿ ದೇಶದ ವಿವಿಧ ಕಡೆಯಲ್ಲೆಲ್ಲಾ ಚದುರಿ ಹೋಗಿರುವ ಹಸ್ತಪ್ರತಿಗಳನ್ನು ವಿನಯಪೂರ್ವಕವಾಗಿ ಕೇಳಿ ಪಡೆಯುವುದು ಇಲ್ಲವೇ ಅವುಗಳ ಮೈಕ್ರೋಫಿಲ್ಮ್ ಪ್ರತಿಗಳನ್ನು ಶೇಖರಿಸುವುದು"[೩] ಪ್ರತಿಷ್ಠಾನದ ಇಂತಹ ವಿವಿಧ ಉದ್ದೇಶ ಮತ್ತು ಯೋಜನೆಗಳಲ್ಲಿ ಪಾಲ್ಗೊಳ್ಳುವುದು.

ಕಾಲ ಗರ್ಭದ ಕತ್ತಲಿನಲ್ಲಿ ಎಲೆ ಮರೆಯ ಕಾಯಿಯಂತೆ ಕಣ್ಣು ಮುಚ್ಚಿ ಕುಳಿತಿರುವ ಬಿ.ಎಂ.ಶ್ರೀ.ಪ್ರತಿಷ್ಠಾನ ಭಂಡಾರದ ಹಸ್ತಪ್ರತಿಗಳ ಲಿಪಿಕಾರರ ಆದರ್ಶಗುಣಗಳು ಮತ್ತು ಅಜ್ಞಾತವಾಗಿ ಉಳಿದಿದ್ದಂತಹ ಹಲವು ವಿಚಾರಧಾರೆಗಳ ಬಗ್ಗೆ ಬೆಳಕನ್ನು ಚೆಲ್ಲಬೇಕೆಂಬ ಹಿರಿದಾಸೆಯನ್ನು ಈ ಪ್ರಬಂಧ ಹೊಂದಿದೆಯಲ್ಲದೆ ನಮ್ಮ ಪೂರ್ವಜರ ಜೀವನದ ಒಲವು-ನಿಲುವುಗಳನ್ನು ಅರಿತು ಕೊಳ್ಳುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

ಬಿ.ಎಂ.ಶ್ರೀ.ಪ್ರತಿಷ್ಠಾನದ ಹಸ್ತಪ್ರತಿಗಳ ಲಿಪಿಕಾರರು ಪ್ರತಿಮಾಡುವಲ್ಲಿ ತೋರಿಸಿದ ಉತ್ಸಾಹ, ಅವರ ಕಠಿಣ ಪರಿಶ್ರಮ ಮತ್ತು ಅವರ ತ್ಯಾಗ ನಿಸ್ವಾರ್ಥ ಮನೋಭಾವನೆಯಿಂದಾಗಿ ಇಂದು ನಮಗೆ ನಕಲು ಕಾರ್ಯದ ಮೂಲಕ ಪ್ರಾಚೀನ ಕನ್ನಡ ಸಾಹಿತ್ಯ ನಮಗೆ ತಲುಪಿರುವ ರೀತಿಯನ್ನು ವಿವರಿಸುವುದರೊಂದಿಗೆ ಅವರಿಗೆ ಐತಿಹಾಸಿಕ ಮಹತ್ವವನ್ನು ತಂದು ಕೊಡುವುದು.

"ಲಿಪಿಕಾರರಿಗೆ ತಾವು ಶ್ರಮಪಟ್ಟು ಸಿದ್ದಪಡಿಸಿದ ಹಸ್ತಪ್ರತಿಗಳು ಹಲವು ತಲೆಮಾರುಗಳ ಓದುಗರಿಗೆ ಉಪಯುಕ್ತವಾಗಬೇಕೆಂಬ ಅಭಿಲಾಷೆ ಇರುತ್ತದೆ. ಕುಮಾರವ್ಯಾಸ ಭಾರತವನ್ನು ಸುಗಟೂರಿನ ಲಕ್ಷ್ಮಿನರಸನಿಗೆ ಪ್ರತಿ ಮಾಡಿದ ಲಿಪಿಕಾರ ಪುತ್ರ ಪೌತ್ರ ಪಾರಂಪರ್ಯವಾಗಿ ವೋದಿಸಿಕೊಳ್ಳುವುದಕ್ಕೆ ಬರೆದಂಥಾ ಭಾರತ ಯುದ್ದ ಪಂಚಕ ಪುಸ್ತಕಕ್ಕೆ ಆಯು ಐಶ್ವರ್ಯಾಭಿವೃದ್ದಿರಸ್ತು" ಎಂಬ ಆಶಯವನ್ನು ವ್ಯಕ್ತಪಡಿಸಿರುವುದು ಅವನ ಉದ್ದೇಶವೇನಿತ್ತೆಂಬುದನ್ನು ತಿಳಿಸುವುದಾಗಿದೆ. ೪

ಕನ್ನಡ ನಾಡಿನ ಸಾವಿರಾರು ಹಸ್ತಪ್ರತಿಗಳಿಗೆ ಪುನರ್‌ಜನ್ಮವನ್ನು ನೀಡಿದ ಬಿ.ಎಂ.ಶ್ರೀ.ಪ್ರತಿಷ್ಠಾನದ ಹಸ್ತಪ್ರತಿಗಳ ಲಿಪಿಕಾರರು ಚಿತ್ರಕಲಾವಿದರೂ ಆಗಿದ್ದರು. ಈ ಮೂಲಕ ಹಸ್ತಪ್ರತಿಗಳ ಸೌಂದರ್ಯವೃದ್ಧಿಗೆ ಕಾರಣರಾಗಿದ್ದಾರೆ ಆದ್ದರಿಂದ ಮೂಲ ಕೃತಿಕಾರನಿಗೆ ಕೊಡುವಷ್ಟೇ ಗೌರವವನ್ನು ಪ್ರತಿಕಾರನಿಗೂ ಅಳಿಲು ಸೇವೆಯಷ್ಟನ್ನಾದರೂ ಈ ಪ್ರಬಂಧದ ಮೂಲಕ ಸಲ್ಲಿಸುವುದು ಮಹದುದ್ದೇಶವಾಗಿದೆ.

ಪ್ರತಿಕಾರರಿಗೆ ನಿವೃತ್ತಿ ವಯಸ್ಸೆಂಬುದೇ ಇಲ್ಲಾ ತನಗೆ ಆಸಕ್ತಿಯಿರುವ ತನಕ ತನ್ನ ಕೈಯಲ್ಲಿ ಕಂಟ ಹಿಡಿದು ಕೊರೆಯುವ, ಶಕ್ತಿಕುಂದುವ ತನಕ ನಿರಂತರವಾಗಿ ಸಂಪ್ರತೀಕರಣ ಮಾಡಬಹುದೆಂಬುದನ್ನು ತಿಳಿಸುವುದರೊಂದಿಗೆ ಅವರಿಗೆ ಮತ್ತಷ್ಟು ಬಲ ತುಂಬುವ ಪ್ರಯತ್ನ ಮಾಡುವುದು ಇನ್ನೂ ಅಜ್ಞಾತವಾಗಿ ಅಚ್ಚಾಗದೆ ಕತ್ತಲೆ ಕೋಣೆಯಲ್ಲಿ, ದೇವಾಲಯಗಳಲ್ಲಿ ತಾತ ಮುತ್ತಾತರ ಪೆಟ್ಟಿಗೆಗಳಲ್ಲಿ, ದೇವರಮನೆಗಳಲ್ಲಿ ಹೊರರಾಜ್ಯಗಳ ವಿವಿಧ ಮಠ, ಸಂಸ್ಥೆಗಳ ಸಂಗ್ರಹದಲ್ಲಿರುವ ಕನ್ನಡ ಹಸ್ತಪ್ರತಿಗಳನ್ನು ನೀರಿಗೋ, ಅಗ್ನಿಗೋ ಸೇರಿಸುವ ಅನಿಷ್ಟಪದ್ದತಿಯನ್ನು ಹೋಗಲಾಡಿಸಿ ಅವುಗಳಲ್ಲಿರುವ ವಿಷಯವನ್ನು ಸಂಗ್ರಹಿಸಿ ಬಿ.ಎಂ.ಶ್ರೀ ಪ್ರತಿಷ್ಠಾನದ ಮೂಲಕ ಪ್ರಕಟಿಸುವುದು ಲಿಪಿಕಾರರ ಬರಹ, ಲಿಪಿ, ಭಾಷೆಯಲ್ಲಿ ದೇಶೀಯತೆಯನ್ನು ಗುರುತಿಸುವುದರೊಂದಿಗೆ ಪ್ರತಿಮಾಡುವ ವೃತ್ತಿಯನ್ನೇ ಪವಿತ್ರ ಮತ್ತು ಶಾಶ್ವತ ಎಂದು ತಿಳಿದ ಬಿ.ಎಂ.ಶ್ರೀ.ಪ್ರತಿಷ್ಠಾನದ ಹಸ್ತಪ್ರತಿಯ ಲಿಪಿಕಾರರ ಕಾರ್ಯವಿಧಾನ ಮತ್ತು ಅವರ ವೈಶಿಷ್ಟ್ಯಗಳನ್ನು ಈ ಮೂಲಕ ಕನ್ನಡಿಗರಿಗೆ ಪರಿಚಯಿಸುವ ಪ್ರಮಾಣಿಕ ಪ್ರಯತ್ನವೇ ಈ ಸಂಪ್ರಬಂಧದ ಉದ್ದೇಶ.

## ಇ) ಸ್ವರೂಪ

"ರಾಜ ಮಹಾರಾಜರುಗಳು ತಾವು ಮಾಡಿದ ಕಾಯಿದೆ ಕಟ್ಟಲೆಗಳನ್ನು ದಾನಧರ್ಮಾಧಿ ವಿಷಯಗಳನ್ನು ಶಾಶ್ವತವಾಗಿರಿಸಲು ಬರವಣಿಗೆಯ ಮೊರೆಹೋದರು. ಇದರ ಫಲವಾಗಿ ನಮಗೆ ದೊರಕುವ ವಿವಿಧ ರೂಪದ ಬರವಣಿಗೆಯ ವಸ್ತುಗಳಲ್ಲಿ ಓಲೆಗರಿಗಳು ಬಹುಮುಖ್ಯವಾದವು. ಇವುಗಳಲ್ಲಿ ವೈದ್ಯ, ಜ್ಯೋತಿಷ್ಯ, ತಾಂತ್ರಿಕ, ಕಾವ್ಯೇತಿಹಾಸಾದಿ ವಿಷಯಗಳು ಅಡಕವಾಗಿವೆ" ೫

ಪ್ರತಿಷ್ಠಾನದ ಹಸ್ತಪ್ರತಿಗಳ ಸಾಮಾನ್ಯ ಸ್ವರೂಪದಲ್ಲಿಯೇ ಅವುಗಳ ವೈವಿಧ್ಯತೆ ನಮ್ಮ ಕಣ್ಣಿಗೆ ಗೋಚರವಾಗುತ್ತದೆ. ಹಾಗೆಯೇ ನಕಲು ಪ್ರತಿಗಳೂ ಸಹ ನಮಗೆ ಬರವಣಿಗೆಯ ವಿವಿಧ ಮುಖಗಳನ್ನು ತೋರಿಸುತ್ತವೆ.

ಬಿ.ಎಂ.ಶ್ರೀ.ಪ್ರತಿಷ್ಠಾನದ ಹಸ್ತಪ್ರತಿಗಳು ಲಿಪಿಕಾರರ ಕಾಲದ ಭಾಷಾ ಸ್ವರೂಪ ಹಾಗೂ ಲಿಪಿಸ್ವರೂಪ, ಸ್ಥಳನಾಮಗಳನ್ನು ನಮಗೆ ಪರಿಚಯಿಸಿಕೊಡುತ್ತವೆಯಲ್ಲದೆ ಕವಿಪಾಠ ನಿರ್ಣಯ ಕಾರ್ಯ ಮಾಡಲು ಅತ್ಯಂತ ಸುಲಭವಾದಂತಾಗಿ ಕನ್ನಡದ ಸಾಂಸ್ಕೃತಿಕ ಇತಿಹಾಸವನ್ನು ಪುನರ್ರಚಿಸುವಲ್ಲಿ ಅನುಕೂಲವಾಗುತ್ತದೆ.

"ಇಂದು ಶೀಘ್ರಲಿಪಿಕಾರರು ಇರುವಂತೆ ಅಂದು ಬಹುಲಿಪಿಕೋವಿದರು, ಛಪ್ಪನ್ನ ದೇಶ ಲಿಪಿಕೋವಿದರು, ಚತುರ್ಭಾಷಾ ಲಿಪಿಕೋವಿದರು ಇದ್ದ ವಿವರಗಳು ಹಾಗೆ ನೇಮಿತ, ಹವ್ಯಾಸಿ, ವೃತ್ತಿ, ಲಿಪಿಕಾರರಿದ್ದ ಬಗ್ಗೆ ತಿಳಿಯುತ್ತದೆ, ಈ ಎಲ್ಲಾ ಉಲ್ಲೇಖಗಳು ಬರೆಪಕಾರನಿಗಿದ್ದ ಸ್ವತಂತ್ರ್ಯ ಮನೋಧರ್ಮದ ಪ್ರವೃತ್ತಿಗಳನ್ನು ಎತ್ತಿತೋರುತ್ತದೆ" ೬ ಈ ಬಗೆಯ ಹಸ್ತಪ್ರತಿಗಳು ಪ್ರತಿಷ್ಠಾನದ ಹಸ್ತಪ್ರತಿ ಭಂಡಾರದಲ್ಲೂ ದೊರಕುತ್ತವೆ.

ಬಿ.ಎಂ.ಶ್ರೀ.ಪ್ರತಿಷ್ಠಾನದ ಹಸ್ತಪ್ರತಿಗಳು ವೈದ್ಯಶಾಸ್ತ್ರ, ಖಗೋಳಶಾಸ್ತ್ರ, ಭೂವಿಜ್ಞಾನ, ಪಶುಚಿಕಿತ್ಸೆ, ಆಯುರ್ವೇದ, ಶಾರೀರಿಕಶಾಸ್ತ್ರ ಮೊದಲಾದ ಹತ್ತು ಹಲವಾರು ಸಮಾಜಿಕ, ವೈಜ್ಞಾನಿಕ ವಿಚಾರಗಳನ್ನೊಳಗೊಂಡಿರುವುದರಿಂದ ಈ ಹಸ್ತಪ್ರತಿ ಅಧ್ಯಯನಕ್ಕೆ ಪ್ರತಿಷ್ಠಾನದ ಹಸ್ತಪ್ರತಿಗಳು ಗಣನೀಯ ಕೊಡುಗೆ ನೀಡುತ್ತವೆ.

"ಮೂಲ ಕೃತಿಕಾರನ ಹಸ್ತಾಕ್ಷರದಲ್ಲಿ ಹಸ್ತಪ್ರತಿಗಳು ದೊರೆಯದೇ ಹೋಗಿ ಕಾಲಕಾಲಕ್ಕೆ ಬೇರೆ ಬೇರೆ ಲಿಪಿಕಾರರ ಕೈವಾಡಕ್ಕೆ ಒಳಗಾಗಿ ಮೂಲವನ್ನು ಅಲ್ಲಲ್ಲಿ ಬದಲಿಸಿರುವ ಹಸ್ತಪ್ರತಿಗಳು ದೊರೆತಿರುವುದೇ ನಮ್ಮಲ್ಲಿಯ ವಾಸ್ತವ ಸಂಗತಿಯಾಗಿರುತ್ತದೆ ಆದ್ದರಿಂದ ಮೂಲಕೃತಿಯ ನಿಜಸ್ವರೂಪವನ್ನು ಕಂಡುಹಿಡಿಯಲು ಬೇರೆ ಬೇರೆ ಮಾತೃಕೆಗಳನ್ನು ನೋಡಿ ಅವುಗಳ ಕಾಲವನ್ನು ಖಚಿತಗೊಳಿಸಿ ಪಾಠಾಂತರಗಳನ್ನು ಪರೀಕ್ಷಿಸಿ ಆಯಾ ಕವಿಯ ಮನೋಧರ್ಮ ಮತ್ತು ಶೈಲಿ ಅವನ ಕಾಲದ ಸಾಹಿತ್ಯ ಸ್ವರೂಪ ಮೊದಲಾದ ಅಂಶಗಳ ಮುನ್ನರಿವಿನಿಂದ ಕೃತಿ ಪಾಠವನ್ನು ನಿರ್ಧರಿಸುವುದು". ೭ ಎಂಬ ವಿದ್ವಾಂಸರ ಮಾತಿಗೆ ಅನುಗುಣವಾದ ಕೆಲವು ಹಸ್ತಪ್ರತಿಗಳು ಪ್ರತಿಷ್ಠಾನದಲ್ಲಿವೆ.

ಬಿ.ಎಂ.ಶ್ರೀ.ಪ್ರತಿಷ್ಠಾನದ ಹಸ್ತಪ್ರತಿಗಳಲ್ಲಿ ಉಕ್ತವಾಗಿರುವ ಲಿಪಿಕಾರರ ವಿಚಾರಧಾರೆಗಳನ್ನೊಳಗೊಂಡಂತೆ ಹಲವಾರು ವಿಶಿಷ್ಟ ಮಾಹಿತಿಗಳನ್ನು ಸಂಗ್ರಹಿಸಿ ಆಧುನಿಕ ಚಿಂತನಾ ಪ್ರಕಾರಕ್ಕೆ ಒಳಪಡಿಸುವುದು ಅಲ್ಲದೆ ಅವರ ಆದರ್ಶ ಮತ್ತು ಅರ್ಹತೆ, ಸಾಂಸ್ಕೃತಿಕ ಮತ್ತು ಸಾಮಾಜಿಕ ಲಕ್ಷಣ ಮತ್ತು ಮೌಲ್ಯಗಳನ್ನು ವಿವೇಚಿಸುವುದರೊಂದಿಗೆ ಪ್ರಾಚೀನರ ಮನೋಧರ್ಮಗಳನ್ನು ಚರ್ಚಿಸುವುದು ಈ ಪ್ರಬಂಧದ ಆಶಯವಾಗಿದೆ.

ಪ್ರಚಲಿತ ದಿನಗಳಲ್ಲಿ ವಿವಿಧ ಅಧ್ಯಯನ ಶಾಖೆಗಳು ಆಧುನೀಕರಣಕ್ಕೆ ಒಳಪಟ್ಟು ತಮ್ಮ ಸ್ವರೂಪವನ್ನೆ ಪರಿವರ್ತಿಸಿಕೊಳ್ಳುವ ಈ ಸಂದರ್ಭದಲ್ಲಿ ಹಸ್ತಪ್ರತಿಗಳ ಅಧ್ಯಯನ ಶಾಖೆಯನ್ನೂ ನೂತನವಾಗಿ ಬಹುಶಿಸ್ತೀಯ ನೆಲೆಯಲ್ಲಿ ಅಧ್ಯಯನ ಮಾಡಬೇಕಿದೆ. "ಹಸ್ತಪ್ರತಿಗಳಂತಹ ಪಾರಂಪರಿಕ ವಾಚಕ ಸಾಮಗ್ರಿಗಳ ಆಯುಷ್ಯ ಇನ್ನೇನು ಮುಗಿದೇ ಹೋಯಿತು ಎನ್ನುವ ಆತಂಕದಲ್ಲಿರುವ ಹೊತ್ತಿಗೆ ಕಂಪ್ಯೂಟರ್ ನಿಂದ ತೆರೆದುಕೊಂಡ ಹೊಸ ಸಾಧ್ಯತೆಗಳು ಹೊಸ ಭಾವನೆಯನ್ನು ಜಾಗೃತಗೊಳಿಸಿವೆ" ೮

ಹೀಗೆ ಆಧುನಿಕ ಸಂದರ್ಭದಲ್ಲಿ ಬದಲಾವಣೆಯಾಗುತ್ತಾ ಬರುವ ಹಸ್ತಪ್ರತಿಗಳ ಲಿಪಿಕಾರರೇ ಮುಖ್ಯವೆಂದೆನಿಸಿದ ಈ ಸಂಪ್ರಬಂಧದಲ್ಲಿ ಲಿಪಿಕಾರರ ಸಾಂಸ್ಕೃತಿಕ ಅಧ್ಯಯನ ಪ್ರಧಾನ ವಸ್ತುವಾಗಿದೆ.

ಈ ಪ್ರಬಂಧದಲ್ಲಿ ಒಟ್ಟು ೫ ಅಧ್ಯಾಯಗಳನ್ನು ರೂಪಿಸಲಾಗಿದ್ದು ಅವುಗಳು ಈ ಕೆಳಕಂಡಂತಿವೆ.
೧.ಪೀಠಿಕೆ, ಉದ್ದೇಶ, ಸ್ವರೂಪ, ವ್ಯಾಪ್ತಿ ೨. ಹಸ್ತಪ್ರತಿ ಅಧ್ಯಯನ ಮತ್ತು ಬಿ.ಎಂ.ಶ್ರೀ ಪ್ರತಿಷ್ಠಾನ ೩. ಹಸ್ತಪ್ರತಿಗಳ ಸಂಪ್ರತೀಕರಣ ೪. ಬಿ.ಎಂ.ಶ್ರೀ ಪ್ರತಿಷ್ಠಾನದ ಹಸ್ತಪ್ರತಿ ಲಿಪಿಕಾರರ ವರ್ಗೀಕರಣ ೫. ಲಿಪಿಕಾರರ ಸಾಂಸ್ಕೃತಿಕ ಸಂಗತಿಗಳು ಇವುಗಳಲ್ಲಿ ಅಧ್ಯಯನಕ್ಕೆ ಅನುಗುಣವಾಗಿ ಕೆಲವು ಒಳವಿಭಾಗಗಳನ್ನು ಮಾಡಿಕೊಂಡು ವಿವರಿಸಲಾಗಿದೆ.

## ಈ) ವ್ಯಾಪ್ತಿ

ಹಸ್ತಪ್ರತಿಗಳು ನಮ್ಮ ಪ್ರಾಚೀನ ಪರಂಪರೆಯ ವಿಶಿಷ್ಟ ಆಕರ ಸಾಮಗ್ರಿಗಳಾಗಿದ್ದು ಕವಿಪ್ರತಿಯಿಂದ ನಕಲುಗೊಂಡು ಹಲವಾರು ಪ್ರತಿಗಳು ಕನ್ನಡ ನಾಡಿನ ವಿವಿಧ ಭಾಗಗಳಲ್ಲಿ ಹರಡಿ ಹಂಚಿಹೋಗಿವೆ.

" ಲಿಪಿಕಾರರು ನಾಡಿನ ಕವಿಗಳನ್ನು ಅಮರರನ್ನಾಗಿಸಿದ, ನಾಡವರ ಸಂಸ್ಕೃತಿಯನ್ನು ಅಕ್ಷಯವಾಗಿ ಉಳಿಸಿದ ಪರಮಕಾರ್ಯ ಮಾಡಿದರಲ್ಲದೇ ಹಸ್ತಪ್ರತಿಗಳ ಮೂಲಕ ಲಿಪಿಕಾರರ ಬದುಕಿನ ಶಿಸ್ತು-ಅಶಿಸ್ತು, ಹೊಣೆಗಾರಿಕೆ ಹೊಣೆಗೇಡಿತನ, ಗಂಭೀರ, ಲಘುಸ್ವಭಾವಗಳೆಲ್ಲ ವೇದ್ಯವಾಗುತ್ತವೆ. ಅದಕ್ಕಾಗಿ ಒಂದರ್ಥದಲ್ಲಿ ಹಸ್ತಪ್ರತಿಗಳ ಅಭ್ಯಾಸವೆಂದರೆ ಪ್ರಾಚೀನ ಲಿಪಿಕಾರರ ಮನೋಧರ್ಮದ ಅಭ್ಯಾಸವೆನಿಸುತ್ತದೆ"[೯] ಎಂಬ ಡಾ.ಎಂ.ಎಂ.ಕಲ್ಬುರ್ಗಿಯವರ ಮಾತು ಹೆಚ್ಚು ಅರ್ಥಪೂರ್ಣವಾಗಿದೆ.

ಬಿ.ಎಂ.ಶ್ರೀ.ಪ್ರತಿಷ್ಠಾನದ ಸಂಗ್ರಹದಲ್ಲಿರುವ ಲಿಪಿಕಾರರು ಪ್ರತಿಮಾಡುವುದರ ಜೊತೆಜೊತೆಯಲ್ಲಿಯೇ ಹಲವಾರು ಅಮೂಲ್ಯ, ಮಹತ್ವದ ವಿಚಾರಗಳನ್ನು ನೀಡಿರುವುದು ಲಿಪಿಕಾರರ ಚರಿತ್ರೆಯನ್ನು ಅರಿಯಲು ಸಹಾಯಕವಾಗಿದೆಯಲ್ಲದೇ ಇಂತಹ ನಕಲು ಕಾರ್ಯವನ್ನು ಓದಿಸೋಮೇಷ್ಟ್ರು, ಶ್ಯಾನಭೋಗರು, ಅರ್ಚಕರು ಮತ್ತು ಇವರ ವಂಶಜರು ಮಕ್ಕಳು ದೇವಾಲಯ, ಚಾವಡಿಕಟ್ಟೆ ಮೊದಲಾದ ಕಡೆಗಳಲ್ಲಿ ಪ್ರತಿಮಾಡುತ್ತಿದ್ದರೆಂಬುದು ಮತ್ತು ಸಮಾಜದಲ್ಲಿನ ಜನರು ಒಂದು ಕಡೆಯಿಂದ ಮತ್ತೊಂದು ಕಡೆಗೆ ತಮ್ಮ ಜೀವನೋಪಾಯಕ್ಕಾಗಿ ವಲಸೆಹೋಗುತ್ತಿದ್ದರು ಎಂಬುದನ್ನು ಹಸ್ತಪ್ರತಿಗಳಲ್ಲಿ ನಿರೂಪಿಸಿರುವುದೂ ಅವುಗಳ ವಿಶಾಲತೆಯನ್ನು ತಿಳಿಸುತ್ತದೆ.

"ಸಾವಿರ ವರ್ಷಗಳ ಕನ್ನಡ ಸಾಹಿತ್ಯ ಸಂಸ್ಕೃತಿಯ ತೇರನ್ನು ನಿರಂತರವಾಗಿ ಎಲ್ಲೂ ತಪ್ಪದೇ ನಮ್ಮವರೆಗೆ ತಂದುಬಿಟ್ಟಿರುವವರು. ಈ ಲಿಪಿಕಾರರ ಕೊಡುಗೆ ಅಪಾರ, ಕವಿಗಿಂತ ಒಂದು ಪಾಲು ಹೆಚ್ಚು, ಕವಿಯ ಸಂದೇಶವನ್ನು ಶಾಶ್ವತವಾಗಿ ಸಾರುವ ವಾಹಕರಾಗಿ ಕೆಲಸ ನಿರ್ವಹಿಸಿದ್ದಾರೆ". ೧೦ ಎಂಬ ಮಾತು ಸೂಕ್ತವಾಗಿದೆ.

ಬಿ.ಎಂ.ಶ್ರೀ.ಪ್ರತಿಷ್ಠಾನದ ಸಂಗ್ರಹದಲ್ಲಿರುವ ಹಸ್ತಪ್ರತಿಗಳು ಲಿಪಿಕಾರರ ಬಗ್ಗೆ ಕೆಲವೊಂದು ಕುತೂಹಲಕಾರಿ ವಿಚಾರಗಳನ್ನು ನಮ್ಮ ಮುಂದಿಡುವುದಲ್ಲದೇ ಲಿಪಿಕಾರರ ಜೀವನ ವೃತ್ತಾಂತ, ಶಿಕ್ಷಣ ಕಾವ್ಯವನ್ನು ನಕಲು ಮಾಡಿದ ಸಮಯ ಸಾಮಾಜಿಕ ಸನ್ನಿವೇಶ ಸ್ಥಳ, ಮೊದಲಾದವುಗಳ ಜೊತೆಜೊತೆಯಲ್ಲಿಯೇ ಪ್ರಾದೇಶಿಕ ಇತಿಹಾಸದ ಬಗ್ಗೆ ಸಮಗ್ರ ಮಾಹಿತಿಗಳನ್ನು ಒದಗಿಸಿಕೊಡುತ್ತವೆ. ಇವುಗಳನ್ನೆಲ್ಲ ಈ ಅಧ್ಯಯನದಲ್ಲಿ ಗುರುತಿಸಲಾಗಿದೆ.

ಹಸ್ತಪ್ರತಿಗಳನ್ನು ಪ್ರತಿಮಾಡುವ ಕಾರ್ಯ ಕೇವಲ ಬ್ರಾಹ್ಮಣ, ವೀರಶೈವ, ಜೈನ, ವೈದಿಕ, ಜನಾಂಗದ ಲಿಪಿಕಾರರಿಗೆ ಸೀಮಿತವಾಗಿರದೆ ಇದರ ವ್ಯಾಪ್ತಿ ಶೂದ್ರ ಲಿಪಿಕಾರರ ಕಡೆಗೂ ಸಾಗಿರುವುದುಂಟು.

ಉದಾ:- "ಚಿಪ್ಪುಲಿಗ ತಿಮ್ಮಯ್ಯನ ಮಗ ರಂಗಯ್ಯನಿಗೆ ನಳಚರಿತ್ರೆ ಪೊಸ್ತಕವನ್ನು ಮಂಗಲದ ಶೇಷ್ಯಮಗ ನಾಗಯ್ಯನು ಬರೆದು ಕೊಟ್ಟ ನಳಚರಿತ್ರೆ ಪುಸ್ತಕಕ್ಕೆ ಜಯಮಂಗಲ ಮಹಾಶ್ರೀ" ಎಂದಿರುವುದು ಆಕಾಲದಲ್ಲಿ ಶೂದ್ರರೂ ಸಹಿತ ಈ ಕ್ರೇತ್ರದಲ್ಲಿ ತಜ್ಞತೆ ಪಡೆದಿದ್ದರು ಎಂಬ ಅಂಶ ವೇದ್ಯವಾಗುತ್ತದೆ". ೧೧

ಬಿ.ಎಂ.ಶ್ರೀ.ಪ್ರತಿಷ್ಠಾನದ ಸಂಗ್ರಹದಲ್ಲಿರುವ ಕನ್ನಡದ ಹಸ್ತಪ್ರತಿಗಳು ಪ್ರಯೋಗಶೀಲತೆಯ ಗುಣವುಳ್ಳವುಗಳಾಗಿದ್ದು ಲಿಪಿಕಾರರಿಂದ ಸಂವಹನ ಮಾದ್ಯಮಗಳಾಗಿ ರೂಪುಗೊಂಡವು. ಪ್ರಾಚೀನ ಕರ್ನಾಟಕದಲ್ಲಿ ಜ್ಞಾನಪ್ರಸಾರದ ಕೇಂದ್ರಗಳಾಗಿದ್ದ ಮಠಮಾನ್ಯಗಳ ಹಸ್ತಪ್ರತಿಗಳು ವೈವಿಧ್ಯಮಯ ಜೀವನ ಕ್ರಮಗಳನ್ನು ಮತ್ತು ಜ್ಞಾನದ ಪ್ರಾಧಾನ್ಯತೆಯನ್ನು ಒತ್ತಿಹೇಳುತ್ತವೆಯಲ್ಲದೆ ಜನಸಾಮಾನ್ಯರಿಗೆ ತಿಳುವಳಿಕೆ ಆಕರಗಳನ್ನು ಸಹಾಯವಾಗುವಂತೆ ಮಾಡಿವೆ.

"ಹಸ್ತಪ್ರತಿಗಳಲ್ಲೇನಿದೆ? ಈ ಪ್ರಶ್ನೆಗೆ ಸಮರ್ಪಕವಾಗಿ ಉತ್ತರ ಹೇಳುವುದು ಕಷ್ಟ ಏನಿಲ್ಲಾ? ಎಂದು ಮರುಪ್ರಶ್ನೆ ಹಾಕಿ ಅನಂತರ ಸಾಧ್ಯವಿದ್ದ ಮಟ್ಟಿಗೆ ಉತ್ತರ ಹೇಳಬಹುದು. ಸಂಸ್ಕೃತದ ಮಾತಿರಲ್ಲಿ ಕನ್ನಡದಲ್ಲಿಯೇ ಸಕಲ ಲೌಕಿಕ, ಆಧ್ಯಾತ್ಮಿಕ, ವೈಚಾರಿಕ, ಸಾಹಿತ್ಯಗಳು ಸಾವಿರಾರು ವರ್ಷಗಳ ಹಿಂದೆಯೇ ಉಗಮಗೊಂಡವು" ೧೨

ಎನ್ನುವ ಹೆಚ್.ದೇವೀರಪ್ಪನವರ ಮಾತು ಹಸ್ತಪ್ರತಿಗಳ ವಸ್ತು ವಿಷಯದ ವ್ಯಾಪ್ತಿಯನ್ನು ಹೆಚ್ಚಿಸುತ್ತದೆ. ಬಿ.ಎಂ.ಶ್ರೀ.ಪ್ರತಿಷ್ಠಾನದ ಹಸ್ತಪ್ರತಿಗಳು ಜ್ಯೋತಿಷ್ಯಶಾಸ್ತ್ರದಿಂದ ಹಿಡಿದು ವೈದ್ಯ, ಮಾಟ, ಮಂತ್ರ, ಯಂತ್ರ, ತಂತ್ರ, ಗುಪ್ತಪೂಜೆ, ನರಬಲಿ, ನಿಧಿನಿಕ್ಷೇಪ, ಸಂತಾನಫಲ, ವೈರಿನಾಶ, ವಶೀಕರಣ, ಭಾನಾಮತಿ,ಗೃಹವಾಸ್ತು, ಶೀಲ್ಪಶಾಸ್ತ್ರ, ಭೂಗೋಳ, ಮನಶಾಸ್ತ್ರ, ಗೋವಧ್ಯ, ಜಲವೈದ್ಯ, ಆಶ್ವಮೇಧಯಾಗ, ಖಗೋಳಶಾಸ್ತ್ರದವರೆಗೆ ಮಾನವನ ಸಂಸ್ಕೃತಿ ಸಂಪನ್ನತೆಗೆ ಏನೇನು ಬೇಕೋ ಅವೆಲ್ಲವುಗಳನ್ನು ಒಳಗೊಂಡಿವೆ. ಯಾವುದೇ ಪರವಾನಿಗೆ ನಿರ್ಬಂಧಗಳಿಲ್ಲದೆ ಲಿಪಿಕಾರರು ರಚಿಸಿಕೊಳ್ಳಬಹುದಿತ್ತು ಎಂಬ ವಿಶಾಲ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿದೆ. ಈ ಎಲ್ಲ ಅಂಶಗಳನ್ನು ಗುರುತಿಸುವ ಮೂಲಕ ಬಿ.ಎಂ.ಶ್ರೀ ಪ್ರತಿಷ್ಠಾನದ ಹಸ್ತಪ್ರತಿಗಳ ಲಿಪಿಕಾರರ ಸಾಂಸ್ಕೃತಿಕ ಅಧ್ಯಯನವನ್ನು ಇಲ್ಲಿ ಮಾಡಲಾಗಿದೆ. ಪ್ರತಿಷ್ಠಾನದ ಪ್ರಕಟಿತ ಹಸ್ತಪ್ರತಿಗಳ ಸೂಚಿಗಳ ಲಿಪಿಕಾರರನ್ನಷ್ಟೇ ಇಲ್ಲಿ ಪರಿಗಣಿಸಲಾಗಿದ್ದು ಸೂಚಿಯಾಗದ ಸಾವಿರಾರು ಹಸ್ತಪ್ರತಿಗಳ ಲಿಪಿಕಾರರನ್ನು ಕಾಲಾವಕಾಶದ ಕೊರತೆಯಿಂದ ಪರಿಗಣಿಸಿಲ್ಲ ಪ್ರತಿಷ್ಠಾನ ಪ್ರಕಟಿಸಿರುವ ಸೂಚಿಗಳು ಈ ರೀತಿ ಇವೆ.

| ಕ್ರ.ಸಂ | ಸೂಚಿ ಪುಸ್ತಕದ ಹೆಸರು | ಸಂಪಾದಕರು | ವರ್ಷ | ಹಸ್ತಪ್ರತಿಗಳ ಸಂಖ್ಯೆ |
|---|---|---|---|---|
| ೦೧. | ಬಿ.ಎಂ.ಶ್ರೀ.ಪ್ರತಿಷ್ಠಾನದ ಕನ್ನಡಹಸ್ತಪ್ರತಿಗಳ ವರ್ಣನಾತ್ಮಕಸೂಚಿ ಸಂಪುಟ-೧ | ಕೆಳದಿಗುಂಡಜೋಯಿಸ್ | ೧೯೮೭ | ೯೬ |
| ೦೨ | ಅಲಿಗೆಮೇಲಿನ ಮನೆಯ ಹಸ್ತಪ್ರತಿಗಳು | ಎ.ಆರ್.ಗುರು | ೨೦೦೬ | ೩೪ |
| ೦೩ | ಅಲಿಗೆಕೆಳಗಣ ಮನೆಯ ಹಸ್ತಪ್ರತಿಗಳು | ಎ.ಆರ್.ಗುರು | ೨೦೦೨ | ೧೮ |

## ಅಡಿ ಟಿಪ್ಪಣಿ

೧. ಡಿ.ಎಲ್.ನರಸಿಂಹಚಾರ್ : ಕನ್ನಡ ಗ್ರಂಥ ಸಂಪಾದನೆ(ಕನ್ನಡ ಕವಿ ಕಾವ್ಯಮಾಲೆ ೧೫೨) ಶಾರದ ಮಂದಿರ. ಪುಟ-೫.- ೧೯೬೪.
೨. ಡಾ.ವೀರೇಶ ಬಡಿಗೇರ : ಹಲಗೆ ಬಳಪ, ಮಯಾಪ್ರಕಾಶನ. ಪುಟ-೩೦-೨೦೦೫
೩. ಎಂ.ವಿ.ಸೀತಾರಾಮಯ್ಯ : ಹಸ್ತಪ್ರತಿಶಾಸ್ತ್ರ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು. ಪುಟ-೭-೧೯೮೩
೪. ಡಾ.ವೀರೇಶ ಬಡಿಗೇರ : ಹಸ್ತಪ್ರತಿ ಅಧ್ಯಯನ, ಸಂ-೧ ಸಂ-೧ ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ. ಪುಟ-೩೪ ೨೦೦೩
೫. ಬಿ.ಎಸ್.ಸಣ್ಣಯ್ಯ : ಪ್ರಬುದ್ಧ ಕರ್ನಾಟಕ, ಸಂ-೫೨ ಸಂ-೧ ಮೈಸೂರು ವಿಶ್ವವಿದ್ಯಾಲಯ. ಪುಟ-೯೨
೬. ಡಾ.ವೀರೇಶ ಬಡಿಗೇರ :ಕನ್ನಡ ಹಸ್ತಪ್ರತಿಗಳ ಬಹುಪಠ್ಯೀಯನೆಲೆಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ. ಪುಟ-೧೪೮-೨೦೦೬
೭. ಎಂ.ವಿ.ಸೀತಾರಾಮಯ್ಯ : ಹಸ್ತಪ್ರತಿಶಾಸ್ತ್ರ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು. ಪುಟ-೩-೧೯೮೩
೮. ಡಾ.ವೀರೇಶ ಬಡಿಗೇರ : ಹಲಗೆ ಬಳಪ, ಮಯಾಪ್ರಕಾಶನ. ಪುಟ-೨-೨೦೦೫
೯. ಬಿ.ಆರ್.ಹಿರೇಮಠ : ಸಾಧನೆ(ಬೆಂ.ವಿ.ವಿ.) ಹಸ್ತಪ್ರತಿ ಲಿಪಿಕಾರರು, (೧೨-೦೨-೧೯೮೩) ಪುಟ-೫೯.
೧೦.ಡಾ.ನಾ.ಗೀತಾಚಾರ್ಯ : ಹಸ್ತಪ್ರತಿ ಅಧ್ಯಯನಶಾಸ್ತ್ರ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಪುಟ-೨೬- ೨೦೦೯.
೧೧.ಡಾ.ಎಸ್.ಎಸ್.ಅಂಗಡಿ : ಕನ್ನಡಗ್ರಂಥ ಸಂಪಾದನೆ ಬಂದ-ವಿನ್ಯಾಸ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. ಪುಟ-೧೭-೨೦೦೭
೧೨.ಹೆಚ್.ದೇವಿರಪ್ಪ : ಕನ್ನಡ ಹಸ್ತಪ್ರತಿಗಳ ಇತಿಹಾಸ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. ಪುಟ-೧೭- ೧೯೯೯

## ಅಧ್ಯಾಯ-೨

## ಹಸ್ತಪ್ರತಿ ಅಧ್ಯಯನ ಮತ್ತು ಬಿ.ಎಂ.ಶ್ರೀ. ಪ್ರತಿಷ್ಠಾನ

ಭಾರತದ ಪ್ರತಿಯೊಂದು ಸಂಘ ಸಂಸ್ಥೆಗೂ ತನ್ನದೇ ಆದಂತಹ ಇತಿಹಾಸವಿರುವಂತೆ ಬಿ.ಎಂ.ಶ್ರೀ.ಪ್ರತಿಷ್ಠಾನವೂ ಸಹ ಸುಮಾರು ಮೂವತ್ತು ವರ್ಷಗಳ ಸುಧೀರ್ಘ ಇತಿಹಾಸದೊಂದಿಗೆ ಹಸ್ತಪ್ರತಿ ಅಧ್ಯಯನ ವಿಭಾಗ, ಸಂಶೋಧನಾ ವಿಭಾಗ ಮತ್ತು ಪುಸ್ತಕ ಪ್ರಕಟಣೆಯಂತಹ ವಿಭಾಗಗಳನ್ನೊಳಗೊಂಡು ಅಳಿಸಿಹೋಗುತ್ತಿರುವಂತಹ ಕನ್ನಡ ನಾಡು ನುಡಿ ಸಂಸ್ಕೃತಿಯ ಸಂರಕ್ಷಣೆಯ ಕಾರ್ಯವನ್ನು ಸತತವಾಗಿ ಮುಂದುವರೆಸಿಕೊಂಡು ಹೋಗುತ್ತಿರುವ ಏಕೈಕ ಪ್ರಾತಿನಿಧಿಕ ಸಂಸ್ಥೆಯಾಗಿದೆ.

ಮೊದಲಿಗೆ ಪ್ರಾಚೀನ ಹಸ್ತಪ್ರತಿಗಳನ್ನು ಸಂಗ್ರಹಿಸಿ ಮತ್ತು ಸಂರಕ್ಷಿಸಿಕೊಂಡು ಬಂದು ತಮ್ಮ ಮನೆ ಮಠಗಳನ್ನೇ ಅವುಗಳ ಆವಾಸ ಸ್ಥಾನವಾಗಿಸಿದ ಎಂ.ವಿ.ಸೀತಾರಾಮಯ್ಯರಿಂದ ಹಿಡಿದು ಇಂದಿನ ಡಾ॥ನಾ.ಗೀತಾಚಾರ್ಯರವರೆಗೆ ಹಲವಾರು ವಿದ್ವಾಂಸರು ಹಸ್ತಪ್ರತಿಗಳನ್ನು ಸಾಂಸ್ಕೃತಿಕ ಜ್ಞಾನ ಸಂಪತ್ತನ್ನು ನಂತರದ ತಲೆಮಾರಿಗೆ ರವಾನಿಸಿ ಲಿಖಿತ ರೂಪದಲ್ಲಿ ಶಾಶ್ವತವಾಗಿ ನೆಲೆ ನಿಲ್ಲುವಂತೆ ಮಾಡುವ ಮಹದಭಿಲಾಷೆಯಿಂದ ಈ ಸಂಸ್ಥೆಯನ್ನು ಅಭಿವೃದ್ಧಿ ಪಡಿಸಲು ಕಾರಣಕರ್ತರಾದರು.

ನಮ್ಮ ಭಾರತದೇಶದಲ್ಲಿ ಕೇವಲ ಬೆರಳೆಣಿಕೆಯಷ್ಟಿರುವ ಹಸ್ತಪ್ರತಿ ಭಂಡಾರಗಳಲ್ಲಿ ಜ್ಞಾನದೀಪವಾಗಿ ಬೆಳೆದ ಬಿ.ಎಂ.ಶ್ರೀ.ಪ್ರತಿಷ್ಠಾನದ ಹಸ್ತಪ್ರತಿ ಭಂಡಾರ ತನ್ನ ಕಾರ್ಯವ್ಯಾಪ್ತಿಯನ್ನು ಮತ್ತು ಘನತೆಯನ್ನು ಹೆಚ್ಚಿಸಿಕೊಂಡಿದೆ. ೧೯೭೯ರಲ್ಲಿ ಆರಂಭವಾದ ಈ ಸಂಸ್ಥೆ ಹಸ್ತಪ್ರತಿ ಕ್ಷೇತ್ರದಲ್ಲಿ ಇಂದು ನಾಡಿನಲ್ಲೇ ಪ್ರತಿಷ್ಠಿತ ಸಂಶೋಧನ ಸಂಸ್ಥೆಯೆನಿಸಿದೆ.

“ ಯಾವುದೇ ನಿರ್ಧಿಷ್ಟ ಹಣಕಾಸಿನ ಸಹಾಯವಿಲ್ಲದೆ ಒಂದು ಖಾಸಗೀ ಸಂಸ್ಥೆಯಾಗಿ ಈ ಮೂವತ್ತು ವರ್ಷಗಳಲ್ಲಿ ಪ್ರತಿಷ್ಠಾನ ಹಸ್ತಪ್ರತಿ ಕ್ಷೇತ್ರದಲ್ಲಿ ನಡೆಸಿರುವ ಸಾಧನೆ ಸಣ್ಣದೇನಲ್ಲ. ಬದಲಾಗಿ ದಾಖಲೆಯಾಗಿ ನಿಲ್ಲುವಂತಹದು. ಕರ್ನಾಟಕದಲ್ಲಿ ನಿರ್ಲಕ್ಷಿಸಲ್ಪಟ್ಟಿದ್ದ ಈ ವಿಭಾಗ ಮತ್ತೆ ಚೇತರಿಸಿಕೊಂಡು ‘ಹಸ್ತಪ್ರತಿ ಅಧ್ಯಯನ ಶಾಸ್ತ್ರ’ ಎಂಬ ನೂತನ ಪರಿಕಲ್ಪನೆಯಾಗಿ ಬೆಳೆಯಲು ಈ ಸಂಸ್ಥೆಯೇ ಮೂಲಕಾರಣ ಮತ್ತು ಮುಖ್ಯಪ್ರೇರಣೆ ಎನ್ನುವಷ್ಟರ ಮಟ್ಟಿಗೆ ಇದರ ಸಾಧನೆಯಿದೆ” ೧ ಎಂಬ ಗೌರವ ಕಾರ್ಯದರ್ಶಿಗಳೂ, ಹಸ್ತಪ್ರತಿ ಕೇಂದ್ರದ ನಿರ್ದೇಶಕರೂ, ವಿದ್ವಾಂಸರೂ ಆದ ಡಾ॥ ನಾ.ಗೀತಾಚಾರ್ಯರ ಮಾತು ಸಂಸ್ಥೆಯನ್ನು ಅವರು ಕಟ್ಟಿಬೆಳೆಸಿದ ಸ್ವರೂಪವನ್ನೆ ಕಟ್ಟಿಕೊಡುತ್ತಾರೆ. ಸಂಸ್ಥಾಪಕ ಸೀತಾರಾಮಯ್ಯನವರ ನಂತರ ತಮ್ಮ ತನು-ಮನ-ಧನವನ್ನರ್ಪಿಸಿ ಹಸ್ತಪ್ರತಿ ಕ್ಷೇತ್ರವನ್ನು ಅಭಿವೃದ್ಧಿ ಪಡಿಸುವ ಮೂಲಕ ಸಂಸ್ಥೆಗೆ ಹೆಸರು

ತಂದುಕೊಟ್ಟಿದ್ದಾರೆ. ಈ ಅವಿರತ ಸೇವೆ, ಶ್ರಮ ಅವರನ್ನು ಬೆಳೆಸಿದ್ದು 'ಹಸ್ತಪ್ರತಿ ಅಧ್ಯಯನ ಶಾಸ್ತ್ರದ' ಹುಟ್ಟಿಗೆ ಕಾರಣಕರ್ತರಾಗಿದ್ದಾರೆ.

'ಹಸ್ತಪ್ರತಿಶಾಸ್ತ್ರ' ಮತ್ತು 'ಹಸ್ತಪ್ರತಿಅಧ್ಯಯನಶಾಸ್ತ್ರ' ಎಂಬ ನವೀನ ಅಧ್ಯಯನ ಶಿಸ್ತುಗಳನ್ನು ಹುಟ್ಟುಹಾಕುವುದರೊಂದಿಗೆ ಅವುಗಳಿಗೆ ಆಧುನಿಕತೆಯ ಲೇಪನವನ್ನು ಸವರಿದೆ ಅಲ್ಲದೆ ನಮ್ಮ ಕನ್ನಡ ನಾಡಿನಲ್ಲಿ ಪ್ರಾಚೀನ ಸಾಹಿತ್ಯ ಮತ್ತು ಸಂಸ್ಕೃತಿಗಳ ಮೂಲಕ ಹಸ್ತಪ್ರತಿಗಳ ಅಧ್ಯಯನದ ಬೆಳವಣಿಗೆಗೆ ಮೀಸಲಾದ ಏಕೈಕ ಸಂಸ್ಥೆಯಾಗಿದೆ. ಬೆಂಗಳೂರಿನಲ್ಲಿ ಜನ್ಮತಳೆದು ಬಹಳಷ್ಟು ಜನ ಸಂಶೋಧಕರನ್ನು ಸೆಳೆದು ನಮ್ಮ ಪ್ರಾಚೀನ ಕನ್ನಡಿಗರು ಏನು ಮಾಡಿದ್ದಾರೆ ಇಂದಿನ ಕನ್ನಡಿಗರು ಏನು ಮಾಡುತ್ತಿದ್ದಾರೆ ಮುಂದಿನ ಕನ್ನಡಿಗರು ಏನು ಮಾಡಬೇಕು ಎಂಬ ರೂಪರೇಷೆಯನ್ನು ಹಾಕಿಕೊಟ್ಟು ನುಡಿದಂತೆ ನಡೆಯುತ್ತಿದೆ.

ಬಿ.ಎಂ.ಶ್ರೀ.ಪ್ರತಿಷ್ಠಾನ ಹಳಗನ್ನಡ ಕಾವ್ಯತರಬೇತಿ, ಹಸ್ತಪ್ರತಿ ಡಿಪ್ಲೋಮೊ ತರಗತಿಗಳೊಂದಿಗೆ ಹಂಪಿ ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆಯಲ್ಲಿ ಎಂಫಿಲ್, ಪಿ.ಹೆಚ್.ಡಿ ತರಬೇತಿಯನ್ನು ನಡೆಸಿ ಕೊಂಡು ಬರುತ್ತಿದ್ದು ಇವುಗಳ ಹಳೆಯ ವಿದ್ಯಾರ್ಥಿಗಳನ್ನೆಲ್ಲಾ ಒಟ್ಟಿಗೆ ಸೇರಿಸಿ 'ಸಿರಿಕಂಟ' ಎಂಬ ವಿದ್ಯಾರ್ಥಿ ವೇದಿಕೆಯನ್ನು ನಿರ್ಮಿಸಿಕೊಂಡಿದ್ದು ಹಸ್ತಪ್ರತಿಗಳ ಸಂರಕ್ಷಣೆ ಸಂಗ್ರಹಣೆ, ಸಂಪ್ರತಿ ಮಾಡಿಕೊಡುವ ಸೇವೆಯನ್ನು ನಿರಂತರವಾಗಿ ನಡೆಸುತ್ತಿದೆ. ಹಸ್ತಪ್ರತಿ ಉಳ್ಳವರು ಬಯಸಿದರೆ ಮನೆ ಬಾಗಿಲಿಗೆ ಹೋಗಿ ಒದಗಿಸಲಾಗುತ್ತಿದೆ.

ಹೀಗೆ 'ಕೇಂದ್ರ ಹಸ್ತಪ್ರತಿ ಭಂಡಾರ'ವಾಗಿ ಸಿದ್ಧವಾಗಲು ಎಲ್ಲ ಅರ್ಹತೆಗಳನ್ನು ಒಳಗೊಂಡು ಇಂದು ರಾಷ್ಟ್ರೀಯ ಮಟ್ಟದಲ್ಲಿ ಸಾಧನೆಯನ್ನು ದಾಖಲಿಸಿದೆ. ಇದಕ್ಕೆ ಪೂರಕವಾಗಿ ಈ ಸಂಸ್ಥೆಯ ಬೆಳವಣಿಗೆಯ ಹಂತಗಳನ್ನು ಹೀಗೆ ಹೇಳಬಹುದು.

ಅ) ಪೂರ್ವಜರಿಂದ ಪಡೆದ ಪ್ರೇರಣೆ

ಆ) ಹಸ್ತಪ್ರತಿಗಳ ಸಂಗ್ರಹದ ಹಿನ್ನೆಲೆಯಲ್ಲಿ ಸಂಸ್ಕೃತಿಯ ಉಳಿವು

ಇ) ಕ್ಷೇತ್ರಾಧ್ಯಯನ ಕಾರ್ಯಗಳು

## ಅ) ಪೂರ್ವಜರಿಂದ ಪಡೆದ ಪ್ರೇರಣೆ

ಬಿ.ಎಂ.ಶ್ರೀ. ಪ್ರತಿಷ್ಠಾನ ಸಂಶೋಧನ ಮತ್ತು ಸಾಹಿತ್ಯ ಸಂವರ್ಧನೆಗಳಿಗೆ ಮೀಸಲಾಗಿರುವ ಸಂಸ್ಥೆಯಾಗಿದ್ದು. ಇದು ಸಂಸ್ಥಾಪಕ ಎಂ.ವಿ.ಸೀತಾರಾಮಯ್ಯನವರ 'ಕಲ್ಪನೆಯಕೂಸು' ಎಂದರೂ ಉತ್ಪ್ರೇಕ್ಷೆಯೆನಿಸುವುದಿಲ್ಲ ಹಸ್ತಪ್ರತಿಗಳ ಸಂಗ್ರಹ ಸಂರಕ್ಷಣೆ, ಹಸ್ತಪ್ರತಿಗಳ ಸೂಚಿನಿರ್ಮಾಣ, ಗ್ರಂಥಸಂಪಾದನೆ ಮೊದಲಾದವುಗಳು ವೈಜ್ಞಾನಿಕ ರೀತಿಯಲ್ಲಿ ಸಾಗಲು ಪೂರ್ವಜರಿಂದ ಸಂಸ್ಥಾಪಕರು ಪಡೆದ ಪ್ರೇರಣೆಯೇ ಕಾರಣವಾಗಿದೆ.

ಪ್ರತಿಷ್ಠಾನದಲ್ಲಿ ಕಾವ್ಯಕ್ಕೆ ಸಂಬಂಧಿಸಿದಂತ ಹಸ್ತಪ್ರತಿಗಳು ಹೇರಳವಾಗಿದ್ದು ನಮ್ಮ ಹಿರಿಯರ ಸಾಹಿತ್ಯಾಭಿಮಾನವನ್ನು ಹಾಗೂ ಧರ್ಮಾಭಿಮಾನವನ್ನು ವ್ಯಕ್ತಪಡಿಸುವುದಲ್ಲದೇ ಗ್ರಂಥಸಂಪಾದನಾ ಕಾರ್ಯಕ್ಕೆ ಒಂದಲ್ಲ ಒಂದು ರೀತಿಯಲ್ಲಿ ನೆರವಾಗಿ ಇದುವರೆಗೂ ಕನ್ನಡ ಸಾಹಿತ್ಯಕ್ಕೆ ಅಪರಿಚಿತವಾಗುಳಿದಿದ್ದ ವಿಚಾರಧಾರೆಗಳನ್ನು ತಿಳಿಸುತ್ತವೆಂಬುದರಲ್ಲಿ ಸಂದೇಹವಿಲ್ಲ. ಸಂಸ್ಥಾಪಕರಿಗೆ ಪೂರ್ವಜರಿಂದ ಬಂದ ಹಸ್ತಪ್ರತಿಗಳು ಕನ್ನಡಕ್ಕೆ ನೂತನ ಹರಿದಾಸ ಕಾವ್ಯಪರಂಪರೆಯನ್ನು ನೀಡಿದವುಗಳಾಗಿವೆ.

ಬಿ.ಎಂ.ಶ್ರೀ.ಅವರ ವಾಣಿಯಾದ "ದೇಶದಲ್ಲಿ ಹುಳುತಿಂದು ಹೋಗದೆ ಇರುವ ಗ್ರಂಥಗಳನ್ನೆಲ್ಲಾ ಸಂಗ್ರಹಿಸಿ ಕೊನೆ ಮಟ್ಟ ಶೋಧಿಸಿ ಒಂದನ್ನು ಬಿಡದಂತೆ ಅಚ್ಚುಹಾಕಿಸುವುದು" ಎಂಬ ಮಾತಿನ ಪ್ರೇರಣೆಯಂತೆ ಜನರ ಮೌಢ್ಯಕ್ಕೆ ತುತ್ತಾಗಿ ವಿನಾಶದ ಅಂಚಿನಲ್ಲಿದ್ದ ಹಲವಾರು ಹಸ್ತಪ್ರತಿಗಳನ್ನು ಬೆಳಕಿಗೆ ತಂದು ಮುಖ್ಯವೆನಿಸಿದವುಗಳನ್ನು ಹಣಕೊಟ್ಟು ಕೊಂಡು ತಂದು ಅವುಗಳ ಬಗ್ಗೆ ಪ್ರಾಯೋಗಿಕ ಶಿಕ್ಷಣವನ್ನು ತರಬೇತಿ ಶಿಬಿರಗಳನ್ನು ಏರ್ಪಡಿಸಿ ಸಂಪಾದಿಸುವ ಹೊಣೆಯನ್ನು ಬಿ.ಎಂ.ಶ್ರೀ. ಪ್ರತಿಷ್ಠಾನದ ಹಸ್ತಪ್ರತಿ ಸಂಪಾದನಾ ವಿಭಾಗ ಹೊತ್ತಿದೆ.

ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ಹಸ್ತಪ್ರತಿ ಭಂಡಾರ ಅಸ್ತಿತ್ವಕ್ಕೆ ಬರುವ ಮೊದಲು ಎಂ.ವಿ.ಸೀತಾರಾಮಯ್ಯನವರು ಸ್ವಪ್ರೇರಣೆಯಿಂದ ತಮ್ಮ ತಮ್ಮ ಕುಲಬಾಂದವರಲ್ಲಿದ್ದ ಸುಮಾರು ಮೂವತ್ತು ಹಸ್ತಪ್ರತಿಗಳನ್ನು ದಾನಮಾಡಿ ಸಂಸ್ಥೆ ಕಟ್ಟಿದ ನಿದರ್ಶನವನ್ನು ಇಲ್ಲಿ ಉಲ್ಲೇಖಿಸಬಹುದು. ನಂತರ ಡಾ॥ನಾ. ಗೀತಾಚಾರ್ಯರ ಪರಿಶ್ರಮದಿಂಧ ನಾಡಿನಾದ್ಯಂತ ಪ್ರದರ್ಶನ-ಪ್ರವಾಸ-ಜಾಗೃತಿ ನಡೆಸಿ ದಾನಿಗಳಿಂದ ಸಂಗ್ರಹಿಸಿದೆ.

ಇಂದು ಪ್ರತಿಷ್ಠಾನವು ಪೂರ್ವಜರ ಪ್ರೇರಣೆಯಿಂದ ೧೫೦೦ಕ್ಕೂ ಹೆಚ್ಚು ಓಲೆಗರಿ ಹಾಗೂ ಕಾಗದ ಹಸ್ತಪ್ರತಿಗಳನ್ನು ಶೇಖರಿಸಿದೆ. ಅವುಗಳು ಗತಿಸುವುದಕ್ಕಿಂತ ಮುಂಚೆಯೇ ಅವುಗಳ ಸಂರಕ್ಷಣೆ ಸಂಪಾದನೆ ಹಾಗೂ ಪ್ರಕಟಣಾ ಕಾರ್ಯವನ್ನು ಕೈಗೊಳ್ಳುವಲ್ಲಿ ಹಲವಾರು ಹೆಸರಾಂತ ವಿದ್ವಾಂಸರುಗಳ ಪಾತ್ರ ಆದರ್ಶ ಪ್ರಾಯವಾಗಿದೆ.

ಸಂಸ್ಥಾಪಕ ಎಂ.ವಿ.ಸೀತಾರಾಮಯ್ಯನವರು ತಮ್ಮ ಮನೆಯಲ್ಲಿದ್ದ ತಮ್ಮ ವಂಶಸ್ಥರ ಅಮೂಲ್ಯ ಹಸ್ತಪ್ರತಿಗಳಿಂದ ಅದ್ವೈತದಾಸರನ್ನು ಬೆಳಕಿಗೆ ತಂದರು ಈ ಪೂರ್ವಜರ ಹಸ್ತಪ್ರತಿಗಳನ್ನು ಪ್ರತಿಷ್ಠಾನಕ್ಕೆ ನೀಡುವಾಗ "ಕನ್ಯಾ ಪಿತೃ ತನ್ನ ಮಗಳನ್ನು ಒಳ್ಳೆಯ ವರನಿಗೆ ಕೊಟ್ಟಾರೆ ಯಾವ ಸಂತೃಪ್ತಿಯುಂಟಾಗುವುದೋ ಅಂತಹ ಸಂತೃಪ್ತಿ ನನಗೆ ಉಂಟಾಗಿದೆ. ಇತರರೂ ಈ ರೀತಿ ಮುಂದೆ ಬಂದು ದಾನ ಮಾಡಿದಲ್ಲಿ ಸಂಸ್ಥೆ ಅವರಿಗೆ ಋಣಿಯಾಗಿರುತ್ತದೆ" ಎಂಬ ಎಂ.ವಿ.ಸೀತಾರಾಮಯ್ಯನವರ ಮಾತನ್ನು ಇಲ್ಲಿ ಸ್ಮರಿಸಬಹುದು' ೨

ಕಾಲಪುರುಷನ ನಿರ್ಲಕ್ಷ್ಯಕ್ಕೆ ಬಿಟ್ಟು, ಕೈಕಟ್ಟಿ ಕೂರದೆ ನಮ್ಮ ವಿದ್ವಾಂಸರು ಹಸ್ತಪ್ರತಿಗಳನ್ನು ಸಂಗ್ರಹಿಸಿ ಸಂಸ್ಕರಿಸಿ ಅವುಗಳಲ್ಲಿ ಅಡಕವಾಗಿರುವ ನಮ್ಮ ಪರಂಪರೆಯ ಸಂಪತ್ತನ್ನು ಮತ್ತು ಅವುಗಳನ್ನು ಪ್ರತಿಮಾಡಿದ ಪ್ರತಿಕಾರರ ಸಂಪೂರ್ಣವಿವರಗಳನ್ನು ಈ ಪೂರ್ವಜರ ಸಲಹೆಯಂತೆ ಇಂದು ಸಂಶೋಧನಾತ್ಮಕವಾಗಿ ಅವಲೋಕಿಸಿ ದಾಖಲಿಸಿರುವುದು ಒಂದು ವಿಶಿಷ್ಟ ಅಂಶವಾಗಿದೆ. ಪ್ರತಿಷ್ಠಾನದಲ್ಲಿ ಪ್ರಸ್ತುತ ಮೂರು ಸೂಚಿಗಳು ಪ್ರಕಟವಾಗಿದ್ದು ಅದರಲ್ಲಿ ಈ ವಿಷಯಗಳೆಲ್ಲ ಅಡಕವಾಗಿವೆ.

### ಆ) ಹಸ್ತಪ್ರತಿಗಳ ಸಂಗ್ರಹದ ಹಿನ್ನೆಲೆಯಲ್ಲಿ ಸಂಸ್ಕೃತಿಯ ಉಳಿವು

ಸಾಂಸ್ಕೃತಿಕ ಸಂಪತ್ತುಗಳಾದ ಹಸ್ತಪ್ರತಿಗಳನ್ನು ಸಂಗ್ರಹಿಸಿ ಪ್ರಕಟಿಸುವಲ್ಲಿ ಅಡಗಿರುವ ಧಾರ್ಮಿಕ, ಲೌಕಿಕ ಹಾಗೂ ವೈಜ್ಞಾನಿಕ ವಿಚಾರಗಳನ್ನು ಉಳಿಸಿ ಬೆಳೆಸುವುದು ಪ್ರತಿಷ್ಠಾನದ ಆದ್ಯಕರ್ತವ್ಯಗಳಲ್ಲೊಂದಾಗಿದೆ. ಅದಕ್ಕಾಗಿ ಹಲವು ಯೋಜನೆಗಳನ್ನು ಹಾಕಿಕೊಂಡು ರಜ್ಯಾದ್ಯಂತ ಪ್ರವಾಸ ಮಾಡಿ ವಿದ್ವಾಂಸರಲ್ಲಿ ಮತ್ತು ಸಾರ್ವಜನಿಕರಲ್ಲಿ ಸಂಸ್ಕೃತಿಯ ಅರಿವು ಮೂಡಿಸಿದೆ.

ಪ್ರತಿಷ್ಠಾನದ ಸಂಗ್ರಹದಲ್ಲಿರುವ ಹಸ್ತಪ್ರತಿಗಳು ಸಾಹಿತ್ಯ, ಸಾಮಾಜಿಕ, ವಿಜ್ಞಾನ, ವೈದ್ಯ, ವ್ಯಾಕರಣ, ನಿಘಂಟು, ಜ್ಯೋತಿಷ್ಯ, ಭವಿಷ್ಯ, ವಾಸ್ತು, ತಂತ್ರಜ್ಞಾನ, ಇತಿಹಾಸ, ಜಾನಪದ, ಯಕ್ಷಗಾನ, ಮೊದಲಾದ ಬಹುಮುಖಿ ಅನ್ಯಜ್ಞಾನ ಶಿಸ್ತುಗಳಿಂದ ಕೂಡಿ ಭಾಷಾ ವೈವಿಧ್ಯತೆಯನ್ನು ವ್ಯತ್ಯಾಸಗಳನ್ನು ಅರಿಯಲು ಸಹಾಯಕವಾಗಿವೆ.

೧. ಪ್ರತಿಷ್ಠಾನ ನಡೆಸುತ್ತಿರುವ ಹಸ್ತಪ್ರತಿ ತರಗತಿಗಳಲ್ಲಿ ಕೆಲವು ಸಂಸ್ಕೃತಿ ಸಂಗತಿಗಳು ಮುಖ್ಯವಾಗಿವೆ ಪ್ರಾಚೀನ ಓಲೆಗರಿಗಳ ಹಸ್ತಪ್ರತಿಗಳಲ್ಲಿ ಕಂಡುಬರುವ ರೇಖಾಚಿತ್ರಗಳು ಕರ್ನಾಟಕದಲ್ಲಿ ಕಲೆಗಾರಿಕೆ ಹುಟ್ಟಿಬೆಳೆದು ಬಂದುದನ್ನು ಮತ್ತು ಅವನ್ನು ಇಂದು ಪ್ರೋತ್ಸಾಹಿಸ ಬೇಕಾಗಿರುವ ಅವಶ್ಯಕತೆಯನ್ನು ಎತ್ತಿ ಸಾರುತ್ತಿವೆ.

೨. ಪ್ರಾಚೀನ ಆಕರಗಳಾದ ಹಸ್ತಪ್ರತಿಗಳು ಸಂಸ್ಕೃತಿಯ ಪ್ರತಿನಿಧಿಗಳಾಗಿ ನಾಡು, ನುಡಿ ನಾಗರೀಕರ ನಡಾವಳಿ ಮತ್ತು ಜೀವನ ಶೈಲಿಯನ್ನು ಅಧ್ಯಯನ ಮಾಡುವುದರ ಮೂಲಕ ಐತಿಹಾಸಿಕ ಸಂಗತಿಗಳನ್ನು ಹೊರಹೊಮ್ಮಿಸುತ್ತವೆ.

೩. ಹಸ್ತಪ್ರತಿಗಳಲ್ಲಿ ಏಕರೂಪತೆ ಕಂಡುಬರದೆ ಸಾಹಿತ್ಯವನ್ನು ಹೊರತುಪಡಿಸಿ ಮಾಟ ಮಂತ್ರ ಗಜಶಾಸ್ತ್ರ, ಅಶ್ವಶಾಸ್ತ್ರ, ವಾಸ್ತುಶಾಸ್ತ್ರ, ಶಿಲ್ಪಶಾಸ್ತ್ರ, ಭೂಗೋಳ ಶಾಸ್ತ್ರ ಮೊದಲಾದ ವಿಚಾರಗಳನ್ನು ತಮ್ಮಲ್ಲಿ ಹುದುಗಿಸಿಕೊಂಡು ಕನ್ನಡ ಕವಿಗಳ, ಪ್ರತಿಕಾರರ, ಆಶ್ರಯದಾತರ ಚರಿತ್ರೆಯನ್ನು ವಿಭಿನ್ನ ಧರ್ಮಗಳ ಆಚಾರ-ವಿಚಾರಗಳನ್ನು ಅರಿಯ ಬಹುದಾಗಿದೆ.

ಪ್ರತಿಷ್ಠಾನದಲ್ಲಿ ಈ ಎಲ್ಲ ಹೊಸ ಹೊಸ ವಿಚಾರಗಳ ಹಸ್ತಪ್ರತಿಗಳು ಅಧ್ಯಯನ ತರಗತಿಗಳಲ್ಲಿ ಸೇರ್ಪಡೆಯಾಗುತ್ತಿವೆಯಲ್ಲದೆ ಸದ್ಯಕ್ಕೆ ಅಲ್ಲಲ್ಲಿ ಉಕ್ತವಾಗಿರುವ ತಮಗೆ ಲಭ್ಯವಾಗದೇ ಇರುವ ಕೆಲವೊಂದು ಹಸ್ತಪ್ರತಿಗಳನ್ನು ಗುರ್ತಿಸಿ ಹೊರತರುವ ಕಾರ್ಯ ನಡೆಯುತ್ತಲೇ ಇರುತ್ತದೆ. ಉದಾ: 'ಸೂತಭಾರತ', 'ಶ್ರೀ ಕೃಷ್ಣದೇವರಾಯನ ದಿನಚರಿ' ಮುಂತಾದವುಗಳನ್ನು ಗಮನಿಸಬಹುದು.

ಪ್ರತಿಷ್ಠಾನಕ್ಕೆ ಕೆಲವು ದಾನಿಗಳು ಉದಾರವಾಗಿ ನೀಡಿದ ಪ್ರಾಚೀನ ಹಸ್ತಪ್ರತಿಗಳು ವೈಶಿಷ್ಟ್ಯ ಪೂರ್ಣವಾಗಿದ್ದು ಅದ್ವೈತ, ದ್ವೈತ, ಶಕ್ತಿವಿಶಿಷ್ಟಾದ್ವೈತ ಹಾಗೂ ಜೈನ ಕೃತಿಗಳು ಒಂದೆಡೆ ಮೇಳೈಸಿ, ವರ್ಣಚಿತ್ರಗಳಿಂದ, ಸುಂದರಲಿಪಿಗಳಿಂದ ಹಲವು ಸಂಶೋಧಕರಿಗೆ ಮುದವನ್ನು ನೀಡುತ್ತಿದೆ.

ಹಸ್ತಪ್ರತಿಗಳು ನಮಗೆ ತೋರುವ ವಿಶಿಷ್ಟ ಮಾರ್ಗಸೂಚನೆಗಳಿಂದ ಹೊಸಹೊಸ ಸಂಗತಿಗಳ ಆವಿಷ್ಕಾರ, ಮತ್ತು ವಿವಿಧ ತಾಣಗಳ ಗುರುತಿಸುವಿಕೆಯಿಂದಾಗಿ ಹಲವಾರು ಸಾಂಸ್ಕೃತಿಕ ಅಂಶಗಳನ್ನು ಮನವರಿಕೆ ಮಾಡಿಕೊಳ್ಳಲು ಸಾಧ್ಯವಾಗುತ್ತವೆಯಲ್ಲದೆ ಕನ್ನಡ ಸಂಸ್ಕೃತಿಯ ಜೀವಂತ ಚಿತ್ರಣಗಳಾಗಿವೆ ಎಂಬುದನ್ನು ಪ್ರತಿಷ್ಠಾನದ ಹಸ್ತಪ್ರತಿ ಅಧ್ಯಯನದ ವಿಭಾಗ ನಾಡಿಗೆ ಮಣಿಹ, ಹಸ್ತಪ್ರತಿಶಾಸ್ತ್ರ, ಹಸ್ತಪ್ರತಿ ಶಾಸ್ತ್ರ ಪರಿಚಯ, ಹಸ್ತಪ್ರತಿ ಅಧ್ಯಯನ ಶಾಸ್ತ್ರ ಮುಂತಾದ ಗ್ರಂಥಗಳ ಮೂಲಕ ಪರಿಚಯಿಸಿದೆ.

ಇ) ಕ್ಷೇತ್ರಾಧ್ಯಯನ ಕಾರ್ಯಗಳು

ಮಾನವೀಯ ಮೌಲ್ಯಗಳು ಕುಸಿದು ಹೋಗುತ್ತಿರುವ ಈಗಿನ ಕಾಲದಲ್ಲಿ ಹಸ್ತಪ್ರತಿಗಳನ್ನು ಸಂಗ್ರಹಿಸುವುದು ತುಂಬಾ ಕಷ್ಟದ ಕಾರ್ಯವೆನ್ನಬಹುದು.

" ಹಸ್ತಪ್ರತಿಗಳು ಇರುವ ಸ್ಥಳ ಪತ್ತೆ ಹಚ್ಚಿ ಅದರ ಒಡೆಯನ ಮನಒಲಿಸಿ ಅವುಗಳನ್ನು ದಾನವಾಗಿ, ಎರವಲಾಗಿ ಪಡೆಯುವ ಪ್ರಯತ್ನ ಈ ಕ್ಷೇತ್ರಾಧ್ಯಯನ ಕಾರ್ಯದ ಉದ್ದೇಶ. ಇಲ್ಲಿ ಕ್ಷೇತ್ರ ಕಾರ್ಯಕ್ಕೆ ಹೋಗುವ ಮೊದಲು ಆ ಕ್ಷೇತ್ರದ ಸಾಂಸ್ಕೃತಿಕ ತಿಳುವಳಿಕೆಯಿದ್ದು ಯಾರ ಬಳಿ ಯಾವ ಪ್ರದೇಶದಲ್ಲಿ ಯಾವರೀತಿಯ ಹಸ್ತಪ್ರತಿಗಳು ದೊರೆಯುತ್ತವೆ ಎಂಬ ಅರಿವಿರಬೇಕು. ಸಂಗ್ರಹಕಾರನು ಸಹನಶೀಲನು, ವಿನಯವಂತನು, ಹಸ್ತಪ್ರತಿ ವಿಚಾರದಲ್ಲಿ ತಿಳುವಳಿಕೆಯುಳ್ಳವನು ಆಗಿರಬೇಕು ಹಸ್ತಪ್ರತಿಯನ್ನು ಸ್ಥಳದಲ್ಲೇ ಓದಿ ಒಡೆಯರಿಗೆ ವಿವರವನ್ನು ಹೇಳುವ ಜ್ಞಾನವಿದ್ದರೆ ಹಸ್ತಪ್ರತಿಒಡೆಯರು ಬೇಗ ಒಲಿದು ಹಸ್ತಪ್ರತಿಗಳನ್ನು ಕೊಡುವ ಸಾಧ್ಯತೆಯಿರುತ್ತದೆ". ೩ ಎಂಬ ಡಾ॥ ನಾ.ಗೀತಾಚಾರ್ಯರ ಮಾತು ಅನುಭವಜನ್ಯವಾಗಿದೆ. ಪ್ರತಿಷ್ಠಾನದ ಹಸ್ತಪ್ರತಿ ಭಂಡಾರವನ್ನು ಬೆಳೆಸಿರುವ ಪರಿಯಾಗಿದೆ.

ಬಿ.ಎಂ.ಶ್ರೀ.ಪ್ರತಿಷ್ಠಾನದ ಹಿಂದಿನ ಮತ್ತು ಈಗಿನ ಅಧ್ಯಕ್ಷರು ಮತ್ತು ಕಾರ್ಯದರ್ಶಿಗಳು ಹಸ್ತಪ್ರತಿಗಳನ್ನು ಕೊಂಡುಕೊಳ್ಳುವಂತಹ ಸಂದರ್ಭಗಳಲ್ಲಿ ಅವರ ಮನಒಲಿಸಲು ಪ್ರಯತ್ನಿಸಿ ಸಾಧ್ಯವಾಗದಿದ್ದಲ್ಲಿ ಬೆಲೆಯನ್ನು ಕೊಟ್ಟು ಕೊಂಡುಕೊಂಡು ಹಸ್ತಪ್ರತಿ ವಿಭಾಗ ಬೆಳೆಯಲು ಕಾರಣರಾದರು.

ಹಸ್ತಪ್ರತಿಗಳ ಸಂಗ್ರಹ ಕಾರ್ಯ ಎಷ್ಟು ಶ್ರಮದಾಯಕವಾದದೆಂಬುದರ ಬಗ್ಗೆ ಬಹಳಷ್ಟು ವಿದ್ವಾಂಸರು ತಮ್ಮ ತಮ್ಮ ಕ್ಷೇತ್ರದಲ್ಲಿ ಕಂಡು ಕೇಳಿದ ಅನುಭವಗಳನ್ನು ಹಂಚಿಕೊಂಡಿದ್ದಾರೆ ಹಸ್ತಪ್ರತಿ ಸಂಗ್ರಹ ಕಾರ್ಯದಲ್ಲಿ ಹಳ್ಳಿ ಹಳ್ಳಿಗಳನ್ನು ಸುತ್ತಿ ಬೆಟ್ಟ ಗುಡ್ಡಗಳನ್ನು ಹತ್ತಿ ಇಳಿದು ಉತ್ಸಾಹಭರಿತರಾಗಿ ಶ್ರದ್ದೆ ಮತ್ತು ನಿಷ್ಠೆಯಿಂದ ಸಂಗ್ರಹ ಕಾರ್ಯ ಮಾಡಿದ್ದನ್ನು ೧೯೮೨ ರಲ್ಲಿ ಪ್ರಕಟವಾದ ಡಾ.ಪ.ಗು. ಹಳಕಟ್ಟಿಯವರ ಜನ್ಮ ಶತಮಾನೋತ್ಸವ ಸ್ಮರಣ ಸಂಪುಟವಾದ 'ಮಣಿಹ" ದಲ್ಲಿ ವಿದ್ವಾನ್ ಕೆ.ವೆಂಕಟರಾಯಾಚಾರ್ಯ, ಪ್ರೊ॥ ಗೌ.ಮ. ಉಮಾಪತಿಶಾಸ್ತ್ರಿ ಪ್ರೊ॥ ಬಿಟಿ ಮಹೀಶವಾಡಿ. ಜಿ.ಅಶ್ವತ್ಥನಾರಾಯಣ ಬಿ.ಎಸ್.ಕುಲಕರ್ಣಿ ಮೊದಲಾದವರು ಹೇಳಿಕೊಂಡಿದ್ದಾರೆ.

ಸತತ ಪರಿಶ್ರಮದಿಂದ ೧೫೦೦ ಕಾಗದ ಮತ್ತು ಓಲೆಗರಿಯ ಹಸ್ತಪ್ರತಿಗಳು ಕನ್ನಡ, ಸಂಸ್ಕೃತ, ತೆಲುಗು, ತಮಿಳು, ಮಲೆಯಾಳಂ, ನಂದಿನಾಗರಿ, ಗ್ರಂಥಾರ ಮೊಡಿ, ಮೊದಲಾದ ಹತ್ತು ಹಲವಾರು ಲಿಪಿಗಳಲ್ಲಿ ನಮ್ಮ ಬಿ.ಎಂ.ಶ್ರೀ.ಪ್ರತಿಷ್ಠಾನದ ಭಂಡಾರವನ್ನು

ಸೇರಿವೆಯಲ್ಲದೆ ವಿವಿಧ ಸೂಚಿ, ಪತ್ರಿಕೆ, ಕೃತಿಗಳ ಮೂಲಕ ಪ್ರಕಟಗೊಳ್ಳುತ್ತಿರುವುದು ಹೆಮ್ಮೆಯ ವಿಷಯವಾಗಿದೆ.

ಕನ್ನಡದ ಹಸ್ತಪ್ರತಿಗಳು ವಿಪುಲವಾಗಿದ್ದು ಸಾಂಸ್ಕೃತಿಕ ದೃಷ್ಟಿಯಿಂದ ಇವುಗಳ ಮಹತ್ವವೇನೇ ಇದ್ದರೂ ಅವುಗಳನ್ನು ವಿನಾಶದ ಅಂಚಿಗೆ ಬಿಡದೆ ಕನಿಷ್ಟ ಆರೈಕೆಯನ್ನು ಮಾಡಿ ಅದರ ಸೂಚಿಯನ್ನು ಮುದ್ರಣ ರೂಪದಲ್ಲಿ ಪ್ರಕಟ ಮಾಡಲೇ ಬೇಕಾಗಿದೆ. ಆಗ ಮಾತ್ರ ಹಲವು ಊರುಗಳನ್ನು ಸುತ್ತಿ ಹಲವಾರು ವ್ಯಕ್ತಿಗಳನ್ನು ಸಂಪರ್ಕಿಸಿ ಹಸ್ತಪ್ರತಿಗಳನ್ನು ಪಡೆದ ದೈಹಿಕ ಹಾಗೂ ಮಾನಸಿಕ ಶ್ರಮಗಳ ನಡುವೆಯೂ ಎಲ್ಲೋ ಒಂದು ಕಡೆ ಮೊಗದಲ್ಲಿ ಮಂದಹಾಸ ಮೂಡುತ್ತದೆ.

ಪ್ರತಿಷ್ಠಾನದ ವಿವಿಧ ವಿದ್ವಾಂಸರು ಲಬ್ದವಾದ ಹಸ್ತಪ್ರತಿಗಳನ್ನೆಲ್ಲಾ ಸಂಗ್ರಹಿಸಿ, ಸಂಸ್ಕರಿಸಿ, ಸಂಪ್ರತಿ ಮಾಡಿ ದಾಖಲೀಕರಣವನ್ನು ಮಾಡುವ ಮೂಲಕ ನಶಿಸಿ ಹೋಗುತ್ತಿದ್ದ ನಮ್ಮ ನಾಡಿನ ಅಮೂಲ್ಯ ಆಸ್ತಿಯಾದ ಪ್ರಾಚೀನ ಹಸ್ತಪ್ರತಿಗಳನ್ನು ಉಳಿಸಿಕೊಟ್ಟು ಸಂಸ್ಕೃತಿಯ ರಕ್ಷಣೆಯ ಜವಾಬ್ದಾರಿಯನ್ನು ನಿಷ್ಠೆಯಿಂದ ಮಾಡಿ ನಾಡಿನವರ ಅಭಿನಂದನೆಗೆ ಪಾತ್ರರಾಗಿದ್ದಾರೆ ಎಂದು ಹೇಳುವ ಡಾ. ನಾ.ಗೀತಾಚಾರ್ಯರ ಮಾತು ಸ್ವ ಅನುಭವದ್ದಾಗಿದೆ.

## ಅಡಿ ಟಿಪ್ಪಣಿ

೧. ಡಾ.ನಾ.ಗೀತಾಚಾರ್ಯ : ಹಸ್ತಪ್ರತಿಶಾಸ್ತ್ರವಿವೇಚನೆ ಸ್ನೇಹನಿಧಿಬಳಗ, ಬೆಂಗಳೂರು. ಪುಟ-೭೫-೨೦೦೧.

೨. ಕೆಳದಿ ಗುಂಡಾಜೋಯಿಸ್ ಮತ್ತು ಡಾ॥ ನಾ.ಗೀತಾಚಾರ್ಯ, ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಸಂಪುಟ-೧ರ ಮುನ್ನುಡಿಯಿಂದ.- ೧೯೮೭

೩. ಡಾ.ನಾ.ಗೀತಾಚಾರ್ಯ : ಹಸ್ತಪ್ರತಿ ಅಧ್ಯಯನಶಾಸ್ತ್ರ, ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ, ಬೆಂಗಳೂರು. ಪುಟ-೨೫ - ೨೦೦೯

## ಅಧ್ಯಾಯ- ೩

### ಹಸ್ತಪ್ರತಿಗಳ ಸಂಪ್ರತೀಕರಣ

ಪ್ರಾಚೀನ ಕನ್ನಡ ಕವಿಗಳು ಒಲೆಗರಿಗಳ ಮೇಲೆ ಬರೆಯುತ್ತಿದ್ದರು ಎಂಬುದು ಈಗಾಗಲೇ ಸ್ಪಷ್ಟವಾಗಿ ತಿಳಿದ ವಿಚಾರವಾಗಿದೆ. ಹೀಗೆ ಬರೆದು ಮುಗಿಸಿದ ನೂರಾರು ಕವಿ ನಿರ್ಮಿತ ಕೃತಿಗಳನ್ನು ಲಿಪಿಕಾರರು ಸ್ವ ಇಚ್ಛೆಯಿಂದ ಇಲ್ಲವೇ ಧರ್ಮ ದಾನದ ಹೆಸರಿನಲ್ಲಿ ಭಕ್ತರು ಅಪಾರ ಸಂಖ್ಯೆಯಲ್ಲಿ ಪ್ರತಿ ಮಾಡಿಸಿದ್ದಾರೆ. ಪುಣ್ಯ ಕಾರ್ಯವೆಂದು ತಿಳಿದ ಅತ್ತಿಮಬ್ಬೆ ಪೊನ್ನನ 'ಶಾಂತಿನಾಥಪುರಾಣವನ್ನು' ಸಾವಿರ ಪ್ರತಿಗಳನ್ನು ಮಾಡಿಸಿ ದಾನನೀಡಿರುವುದನ್ನು ನಾವು ಇಲ್ಲಿ ಸ್ಮರಿಸಬಹುದು.

ಹಿಂದಿನ ಕಾಲದಲ್ಲಿ ಪ್ರತಿಕಾರರು ಉಕ್ಕಿನಕಂಟ ಮತ್ತು ವ್ಯವಸ್ಥಿತವಾಗಿ ಸಿದ್ಧಪಡಿಸಿಕೊಂಡ ತಾಳೆಗರಿಗಳನ್ನು ಸಂಗ್ರಹಿಸಿಕೊಂಡು ಕಲಾತ್ಮಕವಾಗಿ ಗರಿಗಳ ಮೇಲೆ ಅಕ್ಷರಗಳನ್ನು ಕೊರೆದು ಬರೆಯುತ್ತಿದ್ದರು. ಹೀಗೆ ಕೈಯಿಂದ ರೂಪತಳೆದ ಎಲ್ಲವನ್ನು ಸಂರಕ್ಷಿಸಿ ನಕಲುಗೊಳಿಸಿದ ಪರಂಪರೆಯೇ ನಮ್ಮ ಕರ್ನಾಟಕದಲ್ಲಿ ಇತ್ತು ಎಂಬುದು ಬಿ.ಎಂ.ಶ್ರೀ.ಪ್ರತಿಷ್ಠಾನದ ಪ್ರಕಟಣೆಯ ಹಲವಾರು ಉದಾಹರಣೆಗಳಿಂದ ತಿಳಿದು ಬಂದಿದೆ.

ನಮ್ಮ ಪುಣ್ಯಕ್ಕೆ ಇಂದು ಉಪಲಬ್ಧವಾಗಿರುವ ಪ್ರಾಚೀನ ಕವಿಗಳ ಕೃತಿಗಳೆಲ್ಲ ಅವರು ಲಿಖಿಸಿದ ಮೂಲ ಪ್ರತಿಗಿಂತ ಹೆಚ್ಚಾಗಿ ಲಿಪಿಕಾರರು ಪ್ರತಿ ಮಾಡಿರುವ ನಕಲುಗಳೆ ವಿಫುಲವಾಗಿ ದೊರೆತಿವೆ. ಮೊದಲು ಮೌಖಿಕವಾಗಿದ್ದ ಜ್ಞಾನವನ್ನು ತಾಳಪತ್ರಗಳ ಮೇಲೆ ಬರೆಯುವುದೇ ಶ್ರೇಷ್ಠ ಕಾರ್ಯವೆಂದು ತಿಳಿದು ಬಹಳ ಆಸಕ್ತಿಯಿಂದ ಪ್ರತಿ ಮಾಡುವ ಕೆಲಸವನ್ನು ಕೈಗೊಳ್ಳುತ್ತಿದರು.

ಹಸ್ತಪ್ರತಿಗಳನ್ನು ನಕಲು ಮಾಡುವ ಪ್ರತಿಕಾರರು ಬಹಳ ಪ್ರಯಾಸದಿಂದ ಈ ಕೆಲಸವನ್ನು ನಿರ್ವಹಿಸುತ್ತಿದುದ್ದನ್ನು

"ಭಗ್ನಪೃಷ್ಠ ಕಟಿ ಗ್ರೀವಾ ಬದ್ಧ ದೃಷ್ಟೀರದೋ ಮುಖಂ
ಕಷ್ಟೇನ ಲಿಖಿತಂ ಶಾಸ್ತ್ರಂ ಯತ್ನೇನ ಪರಿಪಾಲಯನ್" ೧

ಪ್ರತಿ ಮಾಡುವಲ್ಲಿ ಸೊಂಟ ಕತ್ತುಗಳನ್ನು ನೋಯಿಸಿಕೊಂಡು ಮೊಗವನ್ನು ತಗ್ಗಿಸಿ ನೇರದೃಷ್ಟಿಯನ್ನಿಟ್ಟು ರಚಿಸಿದ್ದೇನೆ. ಇದನ್ನು ಕಾಪಾಡಿ ಕೊಳ್ಳಿ ಎಂದು ಕೆಲವರು ಹೇಳಿದರೆ, ಇನ್ನೂ ಕೆಲವರು ತಮ್ಮ ಅನುಭವದ ಮೂಲಕ ಪ್ರತಿ ಮಾಡುವುದನ್ನೇ ಒಂದು ವೃತ್ತಿಯಾಗಿಸಿಕೊಂಡರು.

ಕವಿಯ ಮೂಲಪ್ರತಿಯನ್ನು ನೋಡಿಕೊಂಡು ತಾಳೆಗರಿಗಳ ಮೇಲೆ ಪ್ರತಿಮಾಡುತ್ತಿದ್ದುದು ಒಂದು ವರ್ಗವಾದರೆ ಒಬ್ಬರು ಪಠನೆ ಮಾಡುತ್ತಿರುವಾಗ ಅದನ್ನು ಕೇಳಿಸಿಕೊಳ್ಳುತ್ತ ಬರೆದು ಕೊಳ್ಳುತ್ತಿದ್ದವರು ಮತ್ತೊಂದು ವರ್ಗದವರು ಅಲ್ಲದೇ ಕಾವ್ಯದ ಹಲವಾರು ಪ್ರತಿಗಳು ಅಗತ್ಯವಿದ್ದಾಗ ಯಾರಾದರೂ ಒಬ್ಬರು ಓದಿ ಹೇಳಿದರು. ಅದನ್ನು ಹಲವಾರು ನಕಲುಗಳಿಸುತ್ತಿದ್ದುದು ಮಗದೊಂದು ಬಗೆಯದಾಗಿ .ಇಲ್ಲಿಯವರೆಗೂ ನಕಲು ಬಳಿನಕಲು, ಮರುನಕಲುಗಳಾಗಿ ಇಂದಿನವರೆಗೂ ಸಾಗಿ ಬಂದಿದೆ.

ಹಸ್ತಪ್ರತಿಗಳ ಸಂಪ್ರತೀಕರಣವನ್ನೇ ನಂಬಿಕೊಂಡು ಹಲವಾರು ಲಿಪಿಕಾರರು ಜೀವನ ಸಾಗಿಸುತ್ತಿದ್ದರು. ಅಲ್ಲದೇ ಅವರಿಗೆ ತಾಳೆಗರಿಗಳ ಮೇಲೆ ಕೊರೆಯುವ ಕೆಲಸ ಸ್ವಾಭಾವಿಕವಾಗಿಯೇ ತುಂಬ ನಿಧಾನವಾದ ಹಾಗೂ ಬೇಸರತರುವಂತಹುದಾಗಿದ್ದರೂ. ತಮ್ಮ ಅಗತ್ಯತೆಗಳನ್ನು ಪೂರೈಸಿಕೊಳ್ಳಲು ಪ್ರತಿ ಮಾಡಲೇ ಬೇಕಾಗಿತ್ತು. ಅಲ್ಲದೇ

"ಪ್ರಾಚೀನ ಕರ್ನಾಟಕದ ಮಠ ಸಾಲೀಮಠ , ಮಂದಿರ, ಬಸತಿ, ಭವನ, ಛತ್ರ, ಮಹಾಮನೆ, ಅರಮನೆಗಳಲ್ಲಿ ಅನ್ನದಾಸೋಹವಲ್ಲದೇ ಜ್ಞಾನದಾಸೋಹವೂ ಅನುದಿನವು ನಡೆಯುತ್ತಲೇ ಇದ್ದಿತು. ಇದರ ಜೊತೆಗೆ ಗ್ರಂಥದಾನ ಕಾರ್ಯವೂ ನಡೆಯುತ್ತಿತ್ತು. ಗ್ರಂಥದಾನ ಮಾಡುವುದು, ಅನ್ನದಾನ, ಅಭಯದಾನ ಭೈಷಜ್ಯದಾನಗಳಂತೆ ಒಂದು ಪುಣ್ಯಕಾರ್ಯವೆಂಬ ನಂಬಿಕೆ ನಮ್ಮ ಪೂರ್ವಜರಲ್ಲಿ ರೂಢಮೂಲವಾಗಿದ್ದಿತ್ತು. ಇದಕ್ಕೆ ಜೈನರು 'ಶಾಸ್ತ್ರದಾನ' ಎಂದು ಕರೆಯುತ್ತಿದ್ದು ಈ ಪದ್ಧತಿ ಅವರಲ್ಲಿ ಈಗಲೂ ರೂಢಿಯಲ್ಲಿದೆ. ಇತರರೂ ಇಂತಹ ಧರ್ಮಕಾರ್ಯದಲ್ಲಿ ಹಿಂದುಳಿದಿರಲಿಲ್ಲಾ. ಒಂದು ಹೊಸ ಕಾವ್ಯವು ಹುಟ್ಟಿದ ಕೂಡಲೇ ಅದಕ್ಕೆ ಅದ್ಭುತವಾದ ಸ್ವಾಗತ ದೊರೆಯುತ್ತಿತ್ತು. ಅದನ್ನು ಓದುವವರು, ಓದಿಸಿ ಕೇಳುವವರು, ಪ್ರತಿ ಮಾಡುವವರು, ಮಾಡಿಸುವವರು ಹಲವರಿರುತ್ತಿದ್ದರು" ೨

ಈ ಕಾರಣದಿಂದಲೇ ಓಲೆಯ ಪ್ರತಿಗಳು ತೀರಾ ಇತ್ತೀಚಿನ ದಿನಗಳವರೆಗೂ ಬಳಕೆಯಲಿದ್ದು ತಮ್ಮ ಬಾಳಿಕೆಯ ಗಟ್ಟಿಮುಟ್ಟುತನವನ್ನು ತೋರಿಸಿಕೊಟ್ಟಿವೆ.

**ಅ) ಲಿಪಿಕಾರರು.**

ವೇದವ್ಯಾಸರು ಹೇಳಿದ ಮಹಾಭಾರತವನ್ನು ಕಾವ್ಯರೂಪದಲ್ಲಿ ಬರೆದ ವಿನಾಯಕನೇ ನಮ್ಮ ಭಾರತೀಯ ಪರಂಪರೆಯ ಮೂಲ ಲಿಪಿಕಾರರ ಹಸ್ತಪ್ರತಿಗಳಲ್ಲಿ 'ಲಿಪಿಕಾರ' ಎಂಬ ಪದಪ್ರಯೋಗವಿಲ್ಲ, ಆದರೆ ಹಸ್ತಪ್ರತಿಗಳ ನಕಲು ಕಾರ್ಯ ಮಾಡಿದವರು ಅವುಗಳ ಆದಿ- ಅಂತ್ಯಗಳಲ್ಲಿ ಲೇಖನ ಬರಹ, ಲಿಖಿತ, ಹಸ್ತಾಕ್ಷರ, ಕಂನಡಿಸು, ದಸ್ತೂರ ಎಂಬ ಪದಗಳನ್ನು ಬಳಸಿದ್ದಾರೆ. ಇವು ಅವರ ಲೇಖನ ವ್ಯವಸಾಯವನ್ನು ವಿವರಿಸುತ್ತವೆ.

"ವೀರನಾರಾಯಣನೆ ಕವಿ, ಲಿಪಿಕಾರ ಕುಮಾರವ್ಯಾಸ" ಎಂಬ ಉಕ್ತಿಯಲ್ಲಿ ಮಾತ್ರ ಲೇಖನ ವ್ಯವಸಾಯ ಮಡುವವನನ್ನು 'ಲಿಪಿಕಾರ' ನೆಂದು ಕರೆಯಲಾಗಿದೆ. ಆದುದ್ದರಿಂದ ಹಸ್ತಪ್ರತಿಗಳನ್ನು ನಕಲು, ಪ್ರತಿನಕಲು, ಬಳಿನಕಲು, ಗೊಳಿಸುವ ಲೇಖನ ವ್ಯವಸಾಯ ಕೈಗೊಂಡವರನ್ನು 'ಲಿಪಿಕಾರ'ರೆಂದು ಕರೆಯಬಹುದು ಇದರ ಪರ್ಯಾಯ ಪದ ಪ್ರತಿಕಾರ. ೩

ಬಿ.ಎಂ.ಶ್ರೀ.ಪ್ರತಿಷ್ಠಾನದ ಸಂಗ್ರಹದಲ್ಲಿರುವ ಹಸ್ತಪ್ರತಿಗಳ ಲಿಪಿಕಾರರು ಪ್ರಾಚೀನ ಕಾಲದಿಂದಲೂ ಬೆಳಕಿಗೆ ಬಾರದೆ ಇರುವ ಕವಿಯನ್ನು ಕೃತಿಯ ಮುಖಾಂತರ ಅವನಿಗೆ ಹೊಸರೂಪವನ್ನು ಕೊಡುವುದರೊಂದಿಗೆ ನಮ್ಮ ಕನ್ನಡ ಭಾಷೆಗೆ ನಿರಂತರ ಪ್ರಗತಿಯನ್ನು ತಂದಿಟ್ಟರು. ಅಲ್ಲದೇ ಇತರೆ ವೃತ್ತಿಯವರಿಗಿಂತ ಹೆಚ್ಚು ಗೌರವ ಮತ್ತು ಸ ಮಾಜದಲ್ಲಿ ಅನೇಕ ಅನುಕೂಲತೆಗಳನ್ನು ಪಡೆದಿದ್ದವರಾಗಿದ್ದಾರೆ.

ಕವಿ ತನ್ನ ಕಾವ್ಯವನ್ನು ಕೈಯಿಂದ ರಚಿಸಿದರೆ, ಕಾಲಾನುಕ್ರಮದಲ್ಲಿ ಲಿಪಿಕಾರರು ಆ ಕಾವ್ಯವನ್ನು ಆನೇಕ ಪ್ರತಿಗಳಾಗಿ ನಿರ್ಮಿಸುವುದರ ಮೂಲಕ ಮೂಲಸೃಷ್ಟಿಯನ್ನು ಅಲ್ಪಸ್ವಲ್ಪ ಬದಲಾವಣೆಯೊಂದಿಗೆ ಪೋಷಿಸಿದ ಬರಹಗಾರರ ಪರಂಪರೆಯೇ ನಮ್ಮ ನಾಡಿನಲ್ಲಿದೆ.

"ಹೀಗೆ ಲಿಪಿಕಾರಣ ಅಥವಾ ಬರವಣಿಗೆ ಪವಿತ್ರ ಶಾಶ್ವತ ಮತ್ತು ಅಧಿಕೃತ ಎಂದು ನಂಬಿಕೊಂಡು ಬಂದ ಪರಂಪರೆಯಲ್ಲಿ ಅಕ್ಷರ ಅಮೂಲ್ಯವಾದದ್ದಾಗಿತ್ತು. ಅದಕ್ಕೊಂದು ಸೊಗಸೂ ಇತ್ತು. ಇಂತಹ ಸೊಗಸುಗಾರ ಲಿಪಿಕಾರ ಪರಂಪರೆಯೇ ಕನ್ನಡದಲ್ಲಿತ್ತು ಲಿಪಿಮಾಡುವುದು ಒಂದು ಸೃಜನಾತ್ಮಕ ಕಾಯಕವೂ ಆಗಿತ್ತು".೪

ಪ್ರಾಚೀನ ಕಾಲದಲ್ಲಿ ಯಾವುದೇ ಮುದ್ರಣ ಸೌಕರ್ಯವೂ ಇರಲಿಲ್ಲ. ಇಂತಹ ಸಂದರ್ಭದಲ್ಲಿಯೂ ಹಲವಾರು ಕೃತಿಗಳನ್ನು ಬರೆಯುವುದರ ಮೂಲಕ ಲಿಪಿಕಾರರು ಸಾಹಿತ್ಯದ ವಿವಿಧ ಮಜಲುಗಳನ್ನು ಒಲೆಗರಿಗಳ ಮುಖಾಂತರ ನಮಗೆ ಬಿಟ್ಟು ಹೋಗಿದ್ದಾರೆ. ಇದಕ್ಕೆ ನಾವು ಲಿಪಿಕಾರನಿಗೆ ಮತ್ತು ಅವುಗಳನ್ನು ಸಂಗ್ರಹಿಸಿದ ಸಂಸ್ಥೆಗೆ ವಂದಿಸಬೇಕಾಗುತ್ತದೆ.

"ಹಸ್ತಪ್ರತಿನಿರ್ಮಾಣ ಕಾರ್ಯವನ್ನು ರಂಗಭೂಮಿಯ ಕಾರ್ಯಚಟುವಟಿಕೆಗಳಿಗೆ ಹೋಲಿಸುವುದಾದರರೆ ಓಲೆಯವರು, ಬಡಿಗ, ಚಿತ್ರಕಾರ, ಲೋಹಕಾರ ಮತ್ತು ವಸ್ತ್ರದವರು ಈ ಎಲ್ಲರೂ ನೇಪಥ್ಯಕರು. ಈ ಬಳಗದವರಲ್ಲಿ ರಂಗದ ಮೇಲೆ ಕಾಣಿಸಿಕೊಳ್ಳುವ ರಂಗಧ್ವಜ ಮಣಿಗಳೆಂದರೆ ಬರೆಪಕಾರ ಒಬ್ಬನೇ, ಉಳಿದವರು ತೆರೆಮರೆಯಲ್ಲಿ ಕಾರಣ ಕರ್ತರಾದ ಸಪ್ತಸಂತಾನರು" ಎಂಬ ಬಿ.ಕೆ.ಹಿರೇಮಠರ ಮಾತುಗಳನ್ನು ಇಲ್ಲಿ ನೆನೆಯಬಹುದು. ೫

ಬಿ.ಎಂ.ಶ್ರೀ.ಪ್ರತಿಷ್ಠಾನದ ಸಂಗ್ರಹದಲ್ಲಿರುವ ಹಸ್ತಪ್ರತಿಗಳ ಲಿಪಿಕಾರರು ಪರಂಪರೆಯಿಂದ ಬಂದ ಹಸ್ತಪ್ರತಿಗಳ ಸಂತಾನವನ್ನು ಉಳಿಸಿ ಬೆಳೆಸಿ ಕಾಪಾಡಿ ಚರಿತ್ರೆಯನ್ನು ನಿರ್ಮಿಸಿದವರು.

ಒಟ್ಟಾರೆಯಾಗಿ ಹಸ್ತಪ್ರತಿಗಳನ್ನು ಅವುಗಳ ನಕಲುಗಳನ್ನು ಕಂಟ, ಕುಂಚ ಮೊದಲಾದ ಲೇಖನಿಗಳ ಸಹಾಯದಿಂದ ಕೊರೆಯುವವರನ್ನು ಬರೆಯುವವರನ್ನು ಲಿಪಿಕಾರರು ಎಂದು ಕರೆಯಬಹುದು.

### ಆ) 'ಲಿಪಿಕಾರರು'-'ಪ್ರತಿಕಾರರು' ಎಂಬ ಪದಗಳ ಅರ್ಥ

ಬರಹಗಾರ ಎಂಬ ಅರ್ಥದಲ್ಲಿ 'ಲಿಪಿಕಾರ' ಎಂಬ ಶಬ್ದವು ಕನ್ನಡ ಸಾಹಿತ್ಯದಲ್ಲಿ ಪ್ರಯೋಗವಾಗಿರುವುದು ನಾವು ತಿಳಿದಿರುವಂತೆ ಒಂದೇ ಒಂದು ಸಲ. ಕುಮಾರ ವ್ಯಾಸನು ಭಾರತದ ಕಥೆಯನ್ನು ಆರಂಭಿಸುತ್ತಾ "ವೀರನಾರಾಯಣನೇ ಕವಿ ಲಿಪಿಕಾರ ಕುಮಾರವ್ಯಾಸ ಎಂದು ಹೇಳಿಕೊಂಡಿರುವುದು". ೬ ಕಂಡುಬರುತ್ತದೆ.

ತಮಿಳಿನಲ್ಲಿ ಗ್ರಂಥವನ್ನು ಅಂದವಾಗಿ ಪ್ರತಿಮಾಡಿ ಕೊಡುವವನನ್ನು 'ಎಳುತ್ತಾಳರ್' (ಬರೆಯುವವನು) ಎಂದೂ ತೆಲುಗಿನಲ್ಲಿ ತಾಳೆಗರಿಗಳ ಮೇಲೆ ಬರೆಯುವವನನ್ನು 'ವ್ರಾಯಟ' (ಬರವಣಿಗೆ) ಎಂದೂ ಬರೆಯುವವರನ್ನು 'ವ್ರಾಯಸಕಾಂಡ್ರು' (ಬರೆಯುವವರು) ಎಂದೂ ಕರೆಯಲಾಗಿದೆ. ೭

ಮೈಸೂರು ಒಡೆಯರ ಕಾಲಕ್ಕೆ ಇವರನ್ನು 'ಲೇಖರಿ' ಎಂದು ಕರೆಯುತ್ತಿದ್ದರು. ಸಂಸ್ಕೃತದಲ್ಲಿ 'ಲೇಖಕ' ಎಂಬ ಪದ ಪ್ರಾಚೀನ ಕಾಲದಿಂದಲೂ ಬಳಕೆಯಲ್ಲಿದ್ದು 'ಲೇಹಕ' ಎಂಬುದು ಅದರ ತದ್ಭವ ರೂಪವಾಗಿ ಬೌದ್ಧರ ಆಗಮ ಗ್ರಂಥಗಳಲ್ಲಿ ಕಾಣಸಿಗುವುದು ಮತ್ತು ರಾಮಾಯಣ ಮಹಾಭಾರತಗಳಲ್ಲಿ 'ಲೇಖಕ' ಎಂಬ ಪದ ಬಳಕೆಯಾಗಿದೆ ಎಂದು ತಿಳಿದು ಬರುವುದರಿಂದ 'ಲಿಪಿಕಾರ'ಎಂಬುದು ಲೇಖಕ ಪದಕ್ಕಿಂತ ತೀರಾ ಇತ್ತೀಚಿನ ಕಾಲದ್ದು ಎಂದು ಹೇಳಬಹುದು.

ಅಶೋಕನ ಶಾಸನಗಳಲ್ಲೊಂದಾದ ಬ್ರಹ್ಮಗಿರಿಯ ಶಾಸನದ ಅಂತ್ಯದಲ್ಲಿ "ಚಪಡೇನ ಲಿಖಿತಂ ಲಿಪಿಕರೇಣ" ಎಂಬ ವಾಕ್ಯವಿದೆ. ಚಪಡ ಎಂಬುವನು ವೃತ್ತಿಯಿಂದ ಲಿಪಿಕಾರನಾಗಿದ್ದನೆಂಬುದು ಇದರಿಂದ ವ್ಯಕ್ತವಾಗುತ್ತದೆ, ಶಿಲಾಶಾಸನದ ಅಥವಾ ತಾಮ್ರ ಶಾಸನದ ಅಕ್ಷರಗಳನ್ನು ಕೆತ್ತುವವನು, ಕವಿ ಹೇಳಿದುದನ್ನು ಬರೆದುದನ್ನು ಬರೆಯುವವನು ಇಬ್ಬರು ಲಿಪಿಕಾರರೇ, ಆದರೆ ಹಸ್ತಪ್ರತಿಗಳನ್ನು ನಕಲುಮಾಡುವವನಿಗೆ ಇರಬೇಕಾದ ಯೋಗ್ಯತೆ, ಅರ್ಹತೆ, ಹೊಣೆಗಾರಿಕೆಗಳು ಶಾಸನಗಳನ್ನು ರೂಪಿಸುವ ರೂವಾರಿಗೆ ಇರುತ್ತಿರಲಿಲ್ಲ, ಪಂಪನು ಇವರನ್ನು 'ಬರೆಪಕಾಱ' ರು ಎಂದು ಕರೆಯುತ್ತಾನೆ. ಪ್ರತಿಕಾರರೂ ಕೂಡ ತಾವು ಮಾಡಿದ ನಕಲುಗಳಿಗೆ 'ಬರೆಪ' ಎಂದೋ 'ಬರೆಹ' ಎಂದೋ ಕರೆದು

ಕೊಂಡಿರುವವರು ಈಗ 'ಬರೆಪಗಾಅ' 'ಬರಹಗಾರ' ಆಗಿ ತನ್ನ ಅರ್ಥ ವ್ಯಾಪ್ತಿಯನ್ನು ಘನತೆಯನ್ನು ಹೆಚ್ಚಿಸಿಕೊಂಡಿದೆ. ಆದುದರಿಂದ ಇವರಿಗೆ ಪ್ರತಿಕಾರರು ಎಂದು ಕರೆಯುವುದೇ ಸೂಕ್ತವೆಂದೆನಿಸುತ್ತದೆ". ೮

" 'ಲಿಪಿಕಾರ' ಎಂಬ ಪದವು ಬಹುಷ 'ಪ್ರತಿಕಾರ' ಎಂಬುದನ್ನು ಸೂಚಿಸದೆ ಮೂಲ ಮಾತೃಕೆಯನ್ನು ಬರೆದವ" ಎಂಬರ್ಥದಲ್ಲಿ ಪ್ರಯೋಗಗೊಳ್ಳುತ್ತಿರಬೇಕು ಇಲ್ಲಿ ಲಿಪಿಕಾರ ಮತ್ತು ಪ್ರತಿಕಾರ ಈ ಇಬ್ಬರ ಕಾರ್ಯ ಒಂದೇ ಬರೆಯುವುದು ಎಂದರೂ ವ್ಯತ್ಯಾಸವಿದೆ ಒಬ್ಬನು ಮೌಕಿಕವಾದುದಕ್ಕೆ ಅಥವಾ ಶಾಬ್ದಿಕವಾದುದಕ್ಕೆ ಲಿಪಿರೂಪ ಕೊಡುತ್ತಾನೆ ಆದುದರಿಂದ ಇವನು ಲಿಪಿಕಾರ ಇನ್ನೊಬ್ಬನು ಲಿಖಿತವಾದುದ್ದನ್ನು ಅಥವಾ ಈ ಮೊದಲೇ ಚಾಕ್ಷುಷವಾದುದನ್ನು ಪ್ರತಿಮಾಡುತ್ತಾನೆ ಆದ್ದುದರಿಂದ ಇವನು ಪ್ರತಿಕಾರ. ೯

ಈ ಮೇಲಿನ ಎಲ್ಲಾ ಅಂಶಗಳನ್ನು ಗಮನಿಸಿದಾಗ 'ಲಿಪಿಕಾರ' ಎಂಬುದನ್ನು ಪ್ರತಿಕಾರ, ಲೇಖಕ ಎಂಬರ್ಥದಲ್ಲಿ ಅಥವಾ ಅದಕ್ಕೆ ಪರ್ಯಾಯ ಪದವೆಂದಾಗಲೀ ಬಳಸುವುದು ಪ್ರತಿಕಾರನಿಗೆ ಯುಕ್ತವೆನಿಸಿಲ್ಲಾ ಆದ್ದರಿಂದ ಪ್ರತಿಮಾಡಿದವರು ತಮ್ಮನ್ನು ಲೇಖಕ ಬರೆಪಕಾರ ಎಂದು ಕರೆದುಕೊಂಡಿದ್ದಾರೆ ಹೊರೆತು ಯಾವ ಪದಗಳನ್ನು ಅವರು ಶಿಥಿಲವಾಗಿ ಬಳಸಿಕೊಂಡಿಲ್ಲಾ ಎಂಬುದು ನಮ್ಮ ಗಮನಕ್ಕೆ ಬರುತ್ತದೆ.

### ಇ) ಲಿಪಿಕಾರರ ವರ್ಗೀಕರಣ

ಹಸ್ತಪ್ರತಿಗಳು ಕೈಬರಹಗಳ ಮೂಲಕ ಅನೇಕ ಶತಮಾನಗಳ ಉದ್ದಕ್ಕೂ ಕೈಯಿಂದ ಕೈಗೆ ದಾಟಿಬಂದ ಪ್ರತಿಗಳಾಗಿ ದೇವಾಲಯ, ಗುರುಕುಲ, ಮಠ, ರಾಜರ ಒಡೆತನದ ಭಂಡಾರ ಮತ್ತು ಅನೇಕ ಖಾಸಗೀ ವ್ಯಕ್ತಿಗಳ ಮನೆಗಳನ್ನು ಸೇರಿ ಕೆಲವೊಂದು ಮೂಡ ನಂಬಿಕೆ ಅಜ್ಞಾನದಿಂದ ಮುಚ್ಚಿಟ್ಟ ಜ್ಞಾನದಂತೆ ಕೊಳೆತು ಹೋಗಿವೆ ಮತ್ತೆ ಕೆಲವು ನಮ್ಮ ಲಿಪಿಕಾರರ ಸಂಗ್ರಹ ದೃಷ್ಟಿಗೆ ಬಿದ್ದು ಅವು ಇಂದು ಬಿಚ್ಚಿಟ್ಟ ಜ್ಞಾನದಂತೆ ಹೊಳೆಯುತ್ತಿವೆ. ಎಂಬ ಅವರ ಮಾತು ಸೂಕ್ತವಾಗಿದೆ.

ಇಂಥಹ ಬಿ.ಎಂ.ಶ್ರೀ.ಪ್ರತಿಷ್ಠಾನದ ಸಂಗ್ರಹದಲ್ಲಿರುವ ಹಸ್ತಪ್ರತಿಗಳ ಕನ್ನಡ ನಾಡಿನ ಲಿಪಿಕಾರರು ನಿಸ್ವಾರ್ಥ ಮನೋಭಾವನೆಯಿಂದ ಸಾವಿರಾರು ಹಸ್ತಪ್ರತಿಗಳನ್ನು ಉಳಿಸುವುದರೊಂದಿಗೆ ನಮ್ಮ ನಾಡಿನ ಸಂಸ್ಕೃತಿಯನ್ನು ಶ್ರಮ, ಶ್ರದ್ದೆ, ವಿವಿಧಜ್ಞಾನಗಳ ಮುಖಾಂತರ ರಕ್ಷಿಸಿಕೊಂಡು ಬಂದಿದ್ದಾರೆ. ಅಲ್ಲದೇ ಎಲ್ಲಿಯೂ ತಮ್ಮ ಕೀರ್ತಿ, ಹೆಸರು ಪ್ರಚಾರ ಗಿಟ್ಟಿಸಿಕೊಳ್ಳುವ ಗೋಜಿಗೆ ಹೋಗದೇ ಭಕ್ತಿಯಿಂದ ಪ್ರತಿಮಾಡಿದವರಾಗಿದ್ದಾರೆ. ಸಾಮಾನ್ಯವಾಗಿ ಹಸ್ತಪ್ರತಿ ಲಿಪಿಕಾರರನ್ನು ಈ ಕೆಳಕಂಡಂತೆ ಮೂರು ರೀತಿಯಲ್ಲಿ ವರ್ಗೀಕರಿಸಿದ್ದಾರೆ. ಈ ಮೂರು ವರ್ಗದ ಲಿಪಿಕಾರರನ್ನೂ ಬಿ.ಎಂ.ಶ್ರೀ.ಪ್ರತಿಷ್ಠಾನದ ಹಸ್ತಪ್ರತಿ ಲಿಪಿಕಾರರಲ್ಲಿ ಗುರುತಿಸಬಹುದಾಗಿದೆ.

೧) ನಿಯುಕ್ತ ಲಿಪಿಕಾರರು (Appointed Writers)

ಪ್ರತಿ ಮಾಡುವ ಕೆಲಸಕ್ಕಾಗಿಯೇ ಲಿಪಿಜ್ಞಾನವಿರುವ ಅನೇಕ ಪ್ರತಿಕಾರರನ್ನು ನೇಮಕ ಮಾಡಿ ಕೊಳ್ಳುತ್ತಿದ್ದರು ಇಂತವರನ್ನು ನಾವು ನಿಯುಕ್ತಲಿಪಿಕಾರರು ಎಂದು ಕರೆಯಬಹುದು.

ಮಠಾಧೀಶರು, ಅರಸರು ಇವರನ್ನು ತಮ್ಮ ಸಂಸ್ಥಾನದಲ್ಲಿ ಲೇಖನಕಾರ್ಯಕ್ಕಾಗಿ ನಿಯುಕ್ತಿಗೊಳಿಸಿಕೊಂಡಿರುತ್ತಿದ್ದರು. ಕೆಲವೊಮ್ಮೆ ಇವರು ಅನ್ಯರ, ಸ್ನೇಹಿತರ, ಸಂಬಂಧಿಕರ, ವಿದ್ಯಾಗುರುಗಳ ವಿನಂತಿಯ ಮೇರೆಗೆ ಯಾವುದೇ ತೆರೆನಾದಂತಹ ಕಾಣಿಕೆ ಅಥವಾ ದಕ್ಷಿಣೆ ಮತ್ತು ಇತರ ಸೌಲಭ್ಯಗಳನ್ನು ಪಡೆದೋ ಪಡೆಯದೆಯೋ ಪರಪ್ರಯೋಜನಾರ್ಥಕ್ಕಾಗಿ ಪ್ರತಿಮಾಡಿ ಕೊಡುತ್ತಿದ್ದರು.

ಉದಾ:- ವಾಗ್ದೇವತಾಚರಿತ ಚಿತ್ರತ ಚಿತ್ತಪದ್ಮಾ ಪದ್ಮಾವತೀ ಚರಣ ಚಾರಣ ಚಕ್ರವರ್ತಿ ಶ್ರೀ ವಾಸುದೇವ ರತಿಕೇಳಿ ಕಥಾನ ಮೇತಿ ಕಂಕರೋತು ಜಯದೇವ ಕವಿಃ ಪ್ರಭಂದಂ ಎಂದು ಪ್ರತಿಷ್ಠಾನದ ಲಿಪಿಕಾರ ಹೇಳಿಕೊಂಡಿದ್ದಾನೆ. (ಹಸ್ತಪ್ರತಿ ಸಂಖ್ಯೆ ನಂ।೭।೫೬)

ಲಿಪಿಕರ, ಸಂಧಿವಿಗ್ರಹಿ, ಮಹಾಸಂಧಿವಿಗ್ರಹಿ, ಕರಣ, ಶ್ರೀಕರಣ, ಕಾಯಸ್ಥ, ಸೇನಬೋವ, ಕುಳವತ್ತಳಗೆ, ಶಾಸನಿಕ, ಧರ್ಮಲೇಖಿನ್,ದಬೀರ್ ಮುಂತಾದ ವಿಶೇಷಣಗಳನ್ನುಳ್ಳ ವ್ಯಕ್ತಿಗಳು ಕೆಲವರು ಶಾಸನಗಳನ್ನು ಬರೆದಿದ್ದು ಲೇಖನ ಕಾರ್ಯಕ್ಕೆ ನಿಯಮಿಸಲ್ಪಟ್ಟಿದ್ದ ಅಧಿಕಾರಿಗಳಾಗಿದ್ದರೆಂಬುದು ಮತ್ತು ಉಪಾಧ್ಯ, ಕರಣಿಕ, ರಾಯಸದವ, ಅರ್ಚಕ ಮೊದಲಾದವರು ತಿಂಗಳುಗಟ್ಟಲೆ ಕುಳಿತು ತಾಳ್ಮೆ, ಶ್ರದ್ಧೆ, ಭಕ್ತಿಯಿಂದ ಪ್ರತಿಮಾಡಿಕೊಡುತ್ತಿದ್ದ ಹಲವಾರು ಉಲ್ಲೇಖಗಳು ನಮಗೆ ದೊರೆಯುತ್ತವೆ. ಅಲ್ಲದೇ ಪ್ರಾಚೀನ ಸಮಾಜದಲ್ಲಿ ಪ್ರತಿಷ್ಠೆಯ ವರ್ಗಗಳಾದ ಸಾಮಂತ, ಮಾಂಡಲೀಕ, ಸುಬೇದಾರ ದಳವಾಯಿ, ನಾಯಕ, ಗೌವುಂಡರಿಂದಲೂ ಕೆಲವೊಮ್ಮೆ ನೇಮಿಸಲ್ಪಟ್ಟ ಪ್ರತಿಕಾರರು ವರ್ಷಾಶನ ಉಂಬಳಿಗಳನ್ನು ಪ್ರತಿಕಾರ್ಯಕ್ಕೆ ಪ್ರತಿಫಲವಾಗಿ ಪಡೆಯುತ್ತಿದ್ದರು.

ಬಾದಾಮಿ ಚಾಲುಕ್ಯರ ಪುಣ್ಯವಲ್ಲಭ ಶ್ರೀ ರಾಮಪುಣ್ಯವಲ್ಲಭ ಗಂಗರವಿಶ್ವಕರ್ಮಾಚಾರಿಗಳು ವಿಜಯನಗರದ ಸಭಾಪತಿ ಮೊದಲಾದವರು ನಿಯುಕ್ತ ಲಿಪಿಕಾರರು ಆಗಿದ್ದಾರೆಂಬುದನ್ನು ಡಾ॥ ಎಂ.ಎಂ.ಕಲ್ಬುರ್ಗಿಯವರು ತಿಳಿಸಿದ್ದಾರೆ.

ನಿಯುಕ್ತ ಲಿಪಿಕಾರರ ಬಗ್ಗೆ ಈ ಕೆಳಗಿನ ಉದಾಹರಣೆಗಳಿಂದ ಸ್ಪಷ್ಟ ಚಿತ್ರಣ ತಿಳಿಯುಬಹುದು.

"ಶ್ರೀಮತು ಘನಲಿಂಗ ಚಕ್ರವರ್ತಿಗಳಾದ ಕಲ್ಲಪ್ಪದೇವರಮೊಮ್ಮಗ ರುದ್ರಪ್ಪನವರಿಗೆ ಹಟ್ಟಿ ರಾಯಸ್ತ ವೆಂಕಣ್ಣನಮಗ ರಂಗಪ್ಪನು ಪುತ್ರ ಪೌತ್ರಾಭಿವೃದ್ಧಿಯಾಗಲೆಂದು ಬರೆದುಕೊಟ್ಟ ಚೆನ್ನಬಸವ ಪುರಾಣದ ಪುಸ್ತಕ". ೧೦

"ರಾಯ ಬೇಲೂರ ಸ್ಥಳದ ಶಾನಭೋಗಿ ನರಸಯ್ಯ ಬರೆದ ಚೋರಕಥೆ ಪುಸ್ತ". ೧೧

"ಮೈಸೂರು ಅಠವಣೆ ಚಾವಡಿಯ ಕರಣಿಕ ದೇವರಸಯ್ಯನ ಮಗ ಪದುಮಣಯ್ಯನು ಧರ್ಮ ಪರೀಕ್ಷೆಯ ಬರೆದುಕೊಟ್ಟ" ೧೨

"ಓಬುಳಾಪುರದ ತೆಲುಗಬಾಳು ಮುರಿಸಿದ್ದಪ್ಪನವರಿಗೆ ಓದಿಸೋಲಿಂಗನು .................. ಹರಸಿ ಬರೆದುಕೊಟ್ಟ ಮರುಳು ಚಾರಿತ್ರ". ೧೩

ನರಸಿಂಹಪುರದ ಪದ್ಮಯ್ಯಗೆ ಸಂಕಿಗಟ್ಟದ ಬಸ್ತಿಯ ರಾಯಪ್ಪನವರ ಕುಮಾರ ಅನಂತಯ್ಯ ಬರೆದ ಪುಸ್ತಕ". ೧೪

ಪ್ರತಿಷ್ಠಾನದ ಓ/೭೫ ಸಂಖ್ಯೆಯ ಕುಮಾರವ್ಯಾಸನ ಪ್ರಾಕೃತ ಭಾರತವನ್ನು ಪ್ರತಿಮಾಡಿದ ಲಿಪಿಕಾರ

" ಸ್ವಸ್ತಿಶ್ರೀ ಜಯಾಭ್ಯುದಯ ಶಾಲಿವಾಹನ ಶಕ ವರುಷಂಗಳು ಶುಭಕ್ರುತುನಾಮ ಸಂವತ್ಸರ ಜ್ಯೆಷ್ಠ ಬ ೧೦ ಸೊಮವಾರಧಲು ಶ್ರೀಮತು ಭೈರವನ ದುರ್ಗದ ಸಮಂತು ಕುದೂರು ಸ್ಥಳ ಶಾನುಬಾಗ ಮಲ್ಲಪ್ಪನವರ ಪುತ್ರ ಶಂಕರಪ್ಪನಮಗ ನಂಜುಂಡನು ಬರೆದ ಪ್ರಾಕೃತ ಭಾರತಕೇ ಶುಭಮಸ್ತು. ಎಂದು ಹೇಳಿಕೊಂಡಿದ್ದಾನೆ. ೧೫

## ೨) ವೃತ್ತಿ ಲಿಪಿಕಾರರು (Proffessional Writers)

ಜೀವನೋಪಾಯಕ್ಕೆ ಹಣವನ್ನು ಪಡೆದು ಹಸ್ತಪ್ರತಿಗಳನ್ನು ಬರೆದುಕೊಡುತ್ತಿದ್ದವರನ್ನು ವೃತ್ತಿ ಲಿಪಿಕಾರರು ಎನ್ನಬಹುದು. ಇವರಿಗೆ ಸಂಪ್ರತೀಕರಣವೇ ವೃತ್ತಿಯಾಗಿರುತ್ತಿತ್ತು.

"ಹಸ್ತಪ್ರತಿಗಳನ್ನು ತಯಾರು ಮಾಡಿ ಪ್ರತಿಮಾಡಿಕೊಡುವ 'ಓಲೆಕಾರ'ರ ಒಂದು ವೃತ್ತಿನಿರತ ಜನಾಂಗವೇ ಇದ್ದ ಬಗ್ಗೆ ಹಲವು ಧಾಖಲೆಗಳಿವೆ. ಪ್ರತಿ ಸುಗ್ಗಿ ಸಮಯದಲ್ಲಿ ಎತ್ತುಗಳ ಮೇಲೆ ಹೇರಿಕೊಂಡು ಗಾಡಿಗಳಲ್ಲಿ ತುಂಬಿಕೊಂಡು ಊರೂರು ಸುತ್ತುತ್ತ ಕೇಳಿದವರ ಮನೆಯಲ್ಲೇ ಉಳಿದುಕೊಂಡು ಅವರಿಗೆ ಬೇಕಾದ ಗ್ರಂಥವನ್ನು ಪ್ರತಿಮಾಡಿಕೊಟ್ಟು ವಿನಿಮಯವಾಗಿ ದವಸ-ಧಾನ್ಯ ಪಡೆದು ಜೀವನ ಸಾಗಿಸುತ್ತಿದ್ದ ಓಲೆಕಾರರು ಇದ್ದರು". ೧೬

ಪ್ರತಿಗೊಳಿಸುವುದನ್ನೇ ಒಂದು ಕಾಯಕವನ್ನಾಗಿಸಿಕೊಂಡು ಬರೆದು ಕೊಟ್ಟದ್ದಕ್ಕಾಗಿ ಜನರಿಂದ ವಿವಿಧ ರೀತಿಯಲ್ಲಿ ಪ್ರತಿಫಲವನ್ನು ಪಡೆಯುತ್ತಿದ್ದರು. ಹಸ್ತಪ್ರತಿಗಳಲ್ಲಿ ಕಂಡು ಬರುವ ದೋಷಗಳನ್ನು ಗಮನಿಸಿದಾಗ ಈ ವೃತ್ತಿ ಲಿಪಿಕಾರರು ಅಷ್ಟೇನು ಕಾವ್ಯಜ್ಞಾನದಲ್ಲಿ ಪರಿಣಿತಿ ಹೊಂದಿರುವಂತೆ ಕಂಡು ಬರುವುದಿಲ್ಲಾ.

ವೃತ್ತಿ ಲಿಪಿಕಾರರ ಅವಶ್ಯಕತೆಯಿದ್ದಾಗ ಮಠ-ಮಂದಿರಗಳು, ದೇವಾಲಯ ವಿದ್ಯಾಲಯಗಳು, ಬಸದಿಗಳು, ಅತ್ತಿಮಬ್ಬೆಯಂತಹ ವ್ಯಕ್ತಿಗಳು, ಸಂಸ್ಥೆಗಳು ಇವರನ್ನು ಕೆಲಸ ಮುಗಿಯುವವರೆಗೆ ನೇಮಿಸಿಕೊಂಡು ಪ್ರತಿಮಾಡಿಸಿ ಪ್ರತಿಫಲವಾಗಿ ಕಾಳುಕಡಿಗಳನ್ನು, ಬಟ್ಟೆ-ಬರೆಗಳನ್ನು ಕೊಡುತ್ತಿದ್ದರು.

"ತೊರವೆ ರಾಮಾಯಣದ ಒಂದು ಓಲೆಯ ಪ್ರತಿಯ ಅಂತ್ಯದಲ್ಲಿ" ಈ ರಾಮಾಯಣದ ಪುಸ್ತಕ ಕಿದುವಿನ ಕೋಟೆ ಗೋಪಾಲಯ್ಯನ ತಮ್ಮ ನೀಲಯ್ಯನಿಗೆ ಬರೆದು ಕಾಣಿಕೆ ತೆಗೆದು ಕೊಂಡು ಕೊಟ್ಟನು" ಎಂದು ಮಂಜೇಶ್ವರದ ಲಿಂಗಣ್ಣನೆಂಬ ಪ್ರತಿಕಾರ ಹೇಳಿಕೊಂಡಿದ್ದಾನೆ, ಈತನು ವೃತ್ತಿಯಿಂದ ಪ್ರತಿಕಾರನಾಗಿರಬಹುದು". ೧೭

ವೃತ್ತಿಲಿಪಿಕಾರರನ್ನು 'ಮಸಿಕಾಯಕದವರು' ಎಂದು ಕರೆಯುವ ಸಂಪ್ರದಾಯವಿತ್ತು ಊರಿನಲ್ಲಿ 'ಮಸಿಕಾಣಿಕೆ' ಸುಂಕ ವಸೂಲಿಯೂ ನಡೆಯುತ್ತಿತ್ತೆಂದು ಡಾ.ನಾ.ಗೀತಾಚಾರ್ಯರು ತಮ್ಮ 'ಹಸ್ತಪ್ರತಿ ಅಧ್ಯಯನ ಶಾಸ್ತ್ರ' ದಲ್ಲಿ ಉಲ್ಲೇಖಿಸಿದ್ದಾರೆ.

"ಓದಿಸುವುದರೊಂದಿಗೆ ಲೇಖನವನ್ನು ವೃತ್ತಿಯಾಗಿ ಮಾಡಿಕೋಂಡವರಿದ್ದಾರೆ ಹೀಗೆ ಇವರು ಓದಿಸುವ, ಲಿಪಿಗೊಳಿಸುವ ಎರಡು ವೃತ್ತಿಗಳನ್ನು ಜೊತೆ ಜೊತೆಯಾಗಿ ಮುಂದುವರೆಸಿಕೊಂಡು ಬಂದರು. ಓದಿಸುವ ಸಮಯದಲ್ಲಿ ಉಪಾಧ್ಯಾಯರಾಗಿದ್ದ ಇವರು ನಕಲು ಗೊಳಿಸುವ ಸಮಯದಲ್ಲಿ ವೃತ್ತಿ ಲಿಪಿಕಾರರಾಗಿ ವಿದ್ಯಾರ್ಥಿಗಳ ಅಧ್ಯಯನಕ್ಕಾಗಿ, ತಮ್ಮ ಅಧ್ಯಾಪನಕ್ಕಾಗಿ ಇತರ ವ್ಯಕ್ತಿಗಳ ಜ್ಞಾನಾರ್ಜನೆಗಾಗಿ ಹಲವು ಸಂಖ್ಯೆಯ ಗ್ರಂಥಗಳನ್ನು ಲಿಪಿಗೊಳಿಸಿರುವರು". ಎಂಬ ಬಿ.ಆರ್.ಹಿರೇಮಠರ ಮಾತನ್ನು ಇಲ್ಲಿ ಗಮನಿಸಬಹುದು.

ಉದಾ:- "ಓದಿಸುವ ಸಮಾದಯ್ಯನವರಲ್ಲಿ ವಸ್ತ್ರದ ಚನ್ನವೀರಪ್ಪನವರು ದಾರಿಣಿಗೆ ತಕ್ಕೊಂಡು ಇದಾರು". ೧೮

ಮಧ್ವದಾಸರ ಬಬ್ರುವಾಹನ ಕಾಳಗ ಪ್ರಸಂಗವನ್ನು ಯಕ್ಷಗಾನ ರೀತಿಯಲ್ಲಿ ಮಾದಲು ಪುಟ್ಟನಾಯಕರಿಗೆ ಬರೆದುಕೊಟ್ಟ ಲಿಪಿಕಾರ ಪ್ರಶಸ್ತಿ ಹೀಗಿದೆ............... "ಶ್ರೀ ಕೃಷ್ಣಾಯನರ್ಮ:॥ ರಕ್ತಾಕ್ಷಿ ಸಂ। ರದ ಶ್ರಾವಣ ಬ೮ಯು ಬುಧವಾರ ಮಾದ್ಲು ಪುಟ್ಟಯ್ಯನಾಯ್ಕರಿಗೆ ಕಿರಣಕೇರಿಯಲ್ಲುಯಿರುವ ಅಪ್ಪಂಣ್ಣೆಯ್ಯನ ತಂಮ ಚಿಂನ್ಯೆಯನ ಅನುಜ ಲ್ಯಗಳು ಮಹದೇವ ಬರದುಕೊಟ್ಟದ್ದು ಬಬ್ರುವಾಹನ ಕಾಳಗ ಕಥಾಪ್ರಸಂಗ ೧ಕ್ಕೆ ಕೊಟ್ಟ ರುಪಾಯಿ ೧ ರತಿ ಸ್ವಯಂವರ ಕಥಾಪ್ರಸಂಗ ೧ಕ್ಕೆ ಕೊಟ್ಟ ರುಪಾಯಿ ೧ ಅಂತು ೨

ಯಿನಾಮು ಕೊಟ್ಟುಯಿದ್ದಾರೆ॥ ಶ್ರಯಸ್ಸು ಅಭಿವೃದ್ಧಿ ದನ ಕನಕ ವಸ್ತು ವಾಹನ ಮಕ್ಕಳು ಮರಿ ಸಹಿತಾ ಲಕ್ಷ್ಮಿ ಕಟಾಕ್ಷಯಿರಬೇಕುಯಂದು ಬರಕೊಟ್ಟ ಪುಸ್ತಕಕ್ಕೆ ಅಚಂದ್ರಾರ್ಕಮಸ್ತು ಜಯಮಂಗಳವಾಗಲೀ ಶ್ರೀ.........ಶ್ರೀ ಎಂದು ಉಲ್ಲೇಖಿಸಿದ್ದಾನೆ. ೧೯

೩)ಹವ್ಯಾಸಿ ಲಿಪಿಕಾರರು (Amateur Writers)

ಬಹಳಷ್ಟು ಜನ ಪ್ರತಿಕಾರರು ತಮ್ಮ ಆತ್ಮಸಂತೋಷಕ್ಕಾಗಿ ಅಥವಾ ತಮ್ಮ ಮನಸ್ಸಿನ ಸಂತೃಪ್ತಿಗಾಗಿ, ಸ್ವಂತ ಉಪಯೋಗಕ್ಕಾಗಿ, ಗ್ರಂಥದ ಮೇಲಿನ ಪ್ರೀತಿಯಿಂದ ಹಲವಾರು ಕಾವ್ಯಗಳನ್ನು ಪ್ರತಿಮಾಡಿಕೊಳ್ಳುತ್ತಿದ್ದರು. ಇಂತವರನ್ನು ಹವ್ಯಾಸಿ ಲಿಪಿಕಾರರು ಎಂದು ಕರೆಯಲಾಗುತ್ತಿತ್ತು

ಯಾವುದೇ ಪ್ರತಿಫಲದ ನಿರೀಕ್ಷೆಯನ್ನು ಇಟ್ಟುಕೊಳ್ಳದೇ ಪ್ರತಿಮಾಡಿ ಕೊಳ್ಳುತ್ತಿದ್ದ/ಕೊಡುತ್ತಿದ್ದ ಹವ್ಯಾಸಿ ಲಿಪಿಕಾರರು ಹೆಚ್ಚಿನ ಸಂಖ್ಯೆಯಲ್ಲಿ ಕಂಡು ಬರುತ್ತಾರೆ. ಇಲ್ಲಿ ಸ್ವಾರ್ಥವಿಲ್ಲದೇ ಸ್ವಪ್ರಯೋಜನ ಮತ್ತು ಸಮಾಜದ ಜನರಿಗಾಗಿ ಗೌಡರು, ನಾಯಕರು, ಅಭ್ಯಾಸಿಗರು, ಉಪಾಧ್ಯಾಯರು, ವಿದ್ಯಾರ್ಥಿಗಳು ವೈವಿಧ್ಯಮಯವಾಗಿ ಹೆಚ್ಚು ಸಂಖ್ಯೆಯಲ್ಲಿ ಪ್ರತಿಮಾಡಿದ ನಿದರ್ಶನಗಳಿವೆ. ಆದರೆ ಬಿ.ಕೆ.ಹೀರೆಮಠರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಪ್ರತಿಕಾರರನ್ನು ಸ್ವ ಸಂತೋಷ ಇತರ ರಂಜನೆ ವಿನೋದದ ಮಟ್ಟದಲ್ಲಿ ಕೆಲಸ ಮಾಡಿ ತೃಪ್ತಿಗೊಳ್ಳುವ ಮನೋಧರ್ಮದ ಹವ್ಯಾಸಿಗಳು ಎಂಬ ಗುಂಪಿಗೆ ಸೇರಿಸುವುದು ಸೂಕ್ತವೆನಿಸಲಾರದು ಎಂದು ಹೇಳಿ ಇಂತವರನ್ನು ಪ್ರವೃತ್ತಿ ಬರೆಪಗಾರರು (Self Engaged)

ಎಂದು ಗುರುತಿಸುವುದು ಸೂಕ್ತವೆಂದು ಹೇಳುತ್ತಾರೆ.

ಪುರಾಣ, ಪುಣ್ಯ ಕಾವ್ಯಗಳನ್ನು ಪ್ರತಿಮಾಡಿ ಮನೆಯಲ್ಲಿಟ್ಟುಕೊಂಡರೆ ಪುಣ್ಯ ಪ್ರಾಪ್ತಿಯಾಗುತ್ತದೆ ಎಂಬ ನಂಬಿಕೆಯೂ ಇತ್ತು ಇವು ಮುಂದಿನ ಓದುಗರಿಗೆ ದೊರೆತಾಗ ಅನುಕೂಲವೂ ಆಗುತ್ತಿತ್ತು.

ವಿವಿಧ ಸಂಸ್ಥೆಗಳ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿಗಳನ್ನು ನೋಡಿದಾಗ ಈ ಕೆಳಕಂಡ ಉದಾಹರಣೆಗಳು ಸಿಗುತ್ತವೆ.

"ಬನ್ನೂರ ಸ್ಥಳದಲ್ಲಿ ಹೊಸಮಠದ ಶ್ರೀ ಬಸವಲಿಂಗ ದೇವರು ತಮ್ಮ ಲೀಲಾವಿನೋದಕ್ಕಾಗಿ ಬರೆದ ಶೂನ್ಯ ಸಂಪಾದನೆ". ೨೦

"ಗದುಗು ಶ್ಯಾಪುರ ಪ್ಯಾಟಿಯಲ್ಲಿ ಇರುವಂತ ಹಿರೇಹಡಗಲಿ ಹುಚ್ಚಪ್ಪನ ಬರಹ ನನ್ನ ಮನೋ ಪ್ರೀತಿಯಿಂದ ಓದು ಅಪೇಕ್ಷೆಯಿಂದ ಬರಕೊಂಡು ಇದ್ದೇನೆ". ೨೧

"ಪುರಾಣರ ಕಲ್ಲಯ್ಯ ದೇವರು, ಕುಮಾರನಾದ ಗುರುವಯ್ಯ ದೇವರು ತಮ್ಮ ಸ್ವಹಸ್ತದಿಂದ ತಮ್ಮ ತಂದೆಗೆ ಈ ಶಾಸ್ತ್ರ ಬರೆದುಕೊಟ್ಟ". ೨೨

"ಚಿಕ್ಕಬಸ್ತಿ ವುಪಾದ್ಯ ಪುಟ್ಟಂಣನವರಿಗೆ ಅಜ್ಜಪ್ಪನವರ ಮಗ ಪುಟ್ಟಯ್ಯನು ಧರ್ಮಾರ್ಥಕಾರಣವಾಗಿ ಬರದುಕೊಟ್ಟ ಯಕ್ಷಗಾನ" ೨೩

ಬಿ.ಎಂ.ಶ್ರೀ.ಪ್ರತಿಷ್ಠಾನದ ಸಂಗ್ರಹದಲ್ಲಿರುವ (ನಂ೬/೫೦/೧) ಆನಂದ ತೀರ್ಥ ಭಗವತ್ಪಾದಾಚಾರ್ಯರ 'ದ್ವಾದಶಸ್ತೋತ್ರ' ವನ್ನು ಪ್ರತಿ ಮಾಡಿದ ಲಿಪಿಕಾರ ಈ ಕೆಳಗಿನಂತೆ ಹೇಳಿಕೊಂಡಿದ್ದಾನೆ.

"ಇತಿ ಶ್ರೀ ಮದ್ವಾನಂದ ತೀರ್ಥ ಭಗವತ್ಪಾದಾಚಾರ್ಯ ವಿರಚಿತ ದ್ವದಶ ಸ್ತೋತ್ರ ದ್ವಾದಶೋದ್ಯಾಯ: ಸಂಪೂರ್ನ೦/ಶ್ರೀಕೃಷ್ಣಾರ್ಪಣಮಸ್ತು॥ ಶ್ರೀ ರಾಮರ್ಪಣಮಸ್ತು॥ ಪ್ಲವಂಗನಾಮಸಂ।೧ರ ಕಾರ್ತಿಕ ಶುದ್ಧ ೧೦XXX ಜಾಲಕುಂಟೆವೆಂಕಪ್ಪ ಬೇಡಹಾಳ್ಳಿ ದೊಡ್ಡ ನರಸಿಂಹ್ಯಗೆ ಆಸಿರ್ವಾದ ಮಾಡಿ ಬರೆಕೊಟ್ಟ ದ್ವಾದಶ ಸ್ತೋತ್ರಕ್ಕೆ ಮಂಗಳ ಮಹಾಶ್ರೀಶ್ರೀಶ್ರೀ ಚೆಯುನೂಂ॥ ೨೪

ಕೊಡೂರು ನಾಗಪ್ಪನಾಯಕ ಎಂಬ ಪ್ರತಿಕಾರ ತಿಮ್ಮಣ್ಣ ಕವಿಯ ಮಹಾಭಾರತದ ಸ್ವರ್ಗಾರೋಹಣ ಪರ್ವದ ಕಥೆಯನ್ನು ೧೭೩೩ರ ಕಾಲಮಾನದಲ್ಲಿ ರಚಿಸಿದ್ದು ಇದು ಭಾಮಿನಿಷಟ್ಪದಿಯ ರೂಪದಲ್ಲಿದೆ ಹೀಗೆ ಹಲವಾರು ಪ್ರತಿಗಳನ್ನು ತನ್ನ ಸ್ವಂತಕ್ಕೆ ನಕಲು ಮಾಡಿಕೊಂಡವುಗಳೆಂದು ಹೇಳಿಕೊಂಡಿದ್ದಾನೆ.

ಒಟ್ಟಾರೆಯಾಗಿ ಲಿಪಿಕಾರರು ಹವ್ಯಾಸಿಗಳಾಗಲಿ, ನಿಯುಕ್ತರಾಗಲಿ, ವೃತ್ತಿಕಾರರಾಗಲೀ ಮೂಲ ಕವಿಯ ಕೀರ್ತಿಯನ್ನು ಸಕಲ ಪ್ರದೇಶಗಳಿಗೂ ಹರಡಿ ಜ್ಞಾನ ಗಂಗೆಯನ್ನು ಮನೆಮನೆಯ ಬಾಗಿಲಿಗೆ ಕೊಂಡೋಯ್ದ ಕೀರ್ತಿ ಈ ಲಿಪಿಕಾರರಿಗೆ ಸಲ್ಲುತ್ತದೆ.

## ಈ) ಲಿಪಿಕಾರರ ಅರ್ಹತೆಗಳು

ಹಸ್ತಪ್ರತಿಗಳನ್ನು ಓದುವುದು ಒಂದು ಕಲೆ, ಅಲ್ಲಿರುವ ವಿಷಯಗಳನ್ನು ತಿಳಿಯಲು ಬೇಕು ತಲೆ, ಆಗ ಮಾತ್ರ ಆ ಕ್ಷೇತ್ರದಲ್ಲಿ ಸಿಗುವುದು ಶಾಶ್ವತವಾದ ನೆಲೆ. ಇದನ್ನು ಬೆಳೆಸಿಕೊಳ್ಳಲು ಸಾಕಷ್ಟು ಶ್ರಮವಹಿಸಬೇಕು ಹೀಗೆ ಹಸ್ತಪ್ರತಿಗಳ್ನು ಓದಿ ಹಲವಾರು ಪ್ರತಿಗಳನ್ನು ಮಾಡುವುದಕ್ಕೆ ಈ ಕೆಳಕಂಡ ಆರ್ಹತೆಗಳಿರಬೇಕೆಂಬುದು ಮುಖ್ಯವಾಗಿರುತ್ತದೆ.

### ತಕ್ಕ ಮಟ್ಟಿನ ಕಾವ್ಯಪರಿಚಯ:-

ಪ್ರತಿಕಾರನು ಅಪಾರ ಪಾಂಡಿತ್ಯದೊಂದಿಗೆ ಶಬ್ದಜ್ಞಾನವನ್ನು ಶಾಸ್ತ್ರ ಪರಿಚಯವನ್ನು ಹೊಂದಿರುವುದರೊಂದಿಗೆ ಕಾವ್ಯವನ್ನು ಯಾವಾಗ ಪ್ರತಿಮಾಡಲಾಗಿದೆ ಮತ್ತು ಅದು ಯಾವ ವಿಷಯಕ್ಕೆ ಸಂಬಂಧಿಸಿದೆ ಎಂಬುದರ ಸಾಮಾನ್ಯ ಪರಿಚಯ ಆಗತ್ಯವಾಗಿರಬೇಕಾಗುತ್ತದೆ ಅಲ್ಲದೇ ನಮಗೆ ಉಪಲಬ್ಧವಿರುವ ಹಸ್ತಪ್ರತಿಗಳ ಆಧಾರದ ಮೇಲೆ ಪ್ರಾಚೀನ ಕಾವ್ಯಗಳನ್ನು ಶಾಸ್ತ್ರೀಯವಾಗಿ ಸಂಪಾದಿಸುವುದಕ್ಕೆ ಸ್ವಲ್ಪಮಟ್ಟಿಗಾದರೂ ಪ್ರಾಥಮಿಕ ಕಾವ್ಯ ಪರಿಜ್ಞಾನ ಲಿಪಿಕಾರನಿಗೆ ಇರಬೇಕಾಗುತ್ತದೆ.

ಕಾವ್ಯವನ್ನು ಅರ್ಥೈಸಿಕೊಂಡು ಅಧುನಿಕ ಸಂದರ್ಭಕ್ಕೆ ಅನ್ವಯಿಸಿ ಅಂದಿನ ಸಾಮಾಜಿಕ ಸ್ಥಿತಿಯಲ್ಲಿ ಅದಕ್ಕೆ ಹೊಸ ರೂಪವನ್ನು ನೀಡುವಂತಿರಬೇಕು.

### ಸುಂದರ ಲಿಪಿ ಮತ್ತು ಭಾಷಾ ಪರಿಶುದ್ಧತೆ :-

ಹಸ್ತಪ್ರತಿಗಳು ಸುಂದರ ಲಿಪಿಯಿಂದ ಕೂಡಿದ್ದರೆ ಯಾರೇ ಆಗಲಿ ಅವುಗಳನ್ನು ಸರಾಗವಾಗಿ ಓದಬಹುದು. ಇಲ್ಲಿ ಪ್ರತಿಕಾರನು ಕಾವ್ಯರಚನೆಯ ಕಾಲದಲ್ಲಿ ಪ್ರಚಲಿತವಾಗಿದ್ದ ಲಿಪಿಯ ಬಂದ ಮತ್ತು ವಿನ್ಯಾಸಗಳ ಅರಿವನ್ನು ಹೊಂದಿರಬೇಕಾಗಿರುತ್ತದೆ. ಅಲ್ಲದೇ ಕನ್ನಡದ ಅಕ್ಷರಗಳನ್ನು ವರ್ತುಲಾಕಾರದಲ್ಲಿ ತಲಕಟ್ಟು ಹೊಕ್ಕುಳಗಳನ್ನು ಸರಿಯಾಗಿ ಹಾಕುವುದರ ಮೂಲಕ ನಕಲು ಕಾರ್ಯ ಮಾಡಬೇಕಾಗುತ್ತದೆ.

ಉದಾ:- "ಕನ್ನಡ ಅಕ್ಷರಗಳನ್ನು ಮುತ್ತಿನಂತೆ ಬರೆಯುತ್ತಿದ್ದ ನವಿಲ್ಗುಂದದ ಮಾದಿರಾಜ ಪುಷ್ಪದಂತ ಪುರಾಣವನ್ನು ಪ್ರತಿಮಾಡಿದನ್ನು ಇಲ್ಲಿ ಸ್ಮರಿಸಬಹುದು". ೨೫

**ತಾಳೆ ಮತ್ತು ತಾಳ್ಮೆ ಮನೋಭಾವ:-**

ಪ್ರತಿಕಾರರು ವ್ಯವಸ್ಥಿತವಾಗಿ ನಕಲು ಮಾಡಬೇಕೆ ವಿನಃ ತಮ್ಮ ಮನಸ್ಸಿಗೆ ಬಂದಂತೆ ಪ್ರತಿ ಮಾಡಬಾರದು. ಹೊಸದಾಗಿ ನಕಲುಗೊಳಿಸುವ ಪ್ರತಿಕಾರರಿಗೆ ಹಸ್ತಪ್ರತಿಗಳ ಭಾಷೆಯು ಅಪರಿಚಿತವಾದಂತಾಗುತ್ತದೆ. ಆದ್ದರಿಂದ ಪ್ರತಿಕಾರರು ತಮ್ಮ ಸಹನೆಯನ್ನು ಕಳೆದು ಕೊಳ್ಳದೆ ತಾಳ್ಮೆ ಮತ್ತು ನಿಷ್ಠೆ ಮನೋಭಾವದಿಂದ ಪರಿಶೀಲಿಸಿದಾಗ ಬಹುಮಟ್ಟಿಗೆ ಯಶಸ್ಸು ದೊರೆಯುತ್ತದೆ.

ಯಥಾವತ್ತಾಗಿ ಮೂಲ ಮಾತೃಕೆಯನ್ನು ಲಿಪಿಕಾರರು ತಮ್ಮ ಮನೋಧರ್ಮಕ್ಕನುಗುಣವಾಗಿ ನಕಲು ಮಾಡುವಂತವರಾಗಿರಬೇಕು. ಒಂದು ಹಸ್ತಪ್ರತಿ ಸಂಪ್ರತಿಯಾದ ಮೇಲೆ ಇನ್ನೊಬ್ಬರೊಂದಿಗೆ ಮೂಲದ ಜೊತೆಯಲ್ಲಿ ತಾಳೆ ನೋಡಬೇಕು ಇಲ್ಲಿ ಎಚ್ಚರಿಕೆಯನ್ನು ವಹಿಸಬೇಕಾಗುತ್ತದೆ ಈ ಹಸ್ತಪ್ರತಿ ಕ್ಷೇತ್ರದಲೂ ತಾಳ್ಮೆ ಇಲ್ಲದೆ ಇದ್ದರೆ ಯಶಸ್ಸು ಪಡೆಯುವುದು ಅಸಾಧ್ಯವೆನಿಸುತ್ತದೆ.

**ಸಾಹಿತ್ಯ ಮತ್ತು ಧರ್ಮಾಭಿಮಾನ :-**

ಪ್ರತಿಕಾರರು ಲೌಕಿಕ ಕೃತಿಗಳಿಗಿಂತ ಹೆಚ್ಚು ಧಾರ್ಮಿಕ ಕೃತಿಗಳನ್ನು ಪ್ರತಿಮಾಡಿರುವುದು ಅವರ ಧರ್ಮಾಭಿಮಾನವನ್ನು ಸೂಚಿಸುತ್ತದೆ ಉದಾ: ಅತ್ತಿಮಬ್ಬೆಯು ಪೊನ್ನನ ಶಾಂತಿನಾಥ ಪುರಾಣವನ್ನು ಪ್ರತಿಕಾರರಿಂದ ಸಾವಿರಾರು ಪ್ರತಿಮಾಡಿಸಿ ಹಂಚಿದ್ದು ಜ್ಞಾನಪ್ರಸಾರ, ಮತಪ್ರಚಾರ ಮತ್ತು ಧರ್ಮಪ್ರಚಾರದ ಉದ್ದೇಶವೇ ಆಗಿದೆ ಎಂದು ಅರಿಯಬಹುದು ಗ್ರಂಥವನ್ನು ಪ್ರತಿಮಾಡುವ ಮೊದಲು ತಾನು ಈ ಕಾರ್ಯದಲ್ಲಿ ಸಫಲತೆಯನ್ನು ಹೊಂದಲಿ ಮತ್ತು ಯಾವುದೇ ವಿಘ್ನಗಳು ಘಟಿಸದಿರಲಿ ಎಂದು ಇಷ್ಟದೈವ ಆರಾಧ್ಯದೈವ, ಅಥವಾ ಗುರುಗಳನ್ನು ವಿನಯ ಪೂರ್ವಕವಾಗಿ ಸ್ತುತಿಸುತ್ತಾರೆ.

ಹಲವಾರು ಪುರಾಣ ಶಾಸ್ತ್ರ ಕಾವ್ಯಗಳನ್ನು ಲಿಪಿಕಾರ ಪ್ರತಿಮಾಡುತ್ತಿರುವಾಗ ಅದನ್ನು ಒಂದು ಸಾಹಿತ್ಯ ಕೃತಿ ಎನ್ನುವುದಕ್ಕಿಂತ ಮಿಗಿಲಾಗಿ ಪುಣ್ಯ ಕಾರ್ಯವೆಂದು ತಿಳಿದು ನಕಲುಗೊಳಿಸಬೇಕಾಗುತ್ತದೆ.

**ಕಂಟಪತ್ರ ಹಿಡಿಯುವ ಅಕ್ಷರ ಕೊರೆಯುವ ಕೌಶಲ್ಯ:-**

ಪ್ರತಿಕಾರರು ಶ್ರಮವಹಿಸಿ ಕಂಟವನ್ನು ವಿಶಿಷ್ಟ ಭಂಗಿಯಲ್ಲಿ ಹಿಡಿದು ಕೊರೆದಾಗ ತನ್ನಷ್ಟಕ್ಕೆ ತಾನೆ ಅಕ್ಷರಗಳ ಸೌಂದರ್ಯ ವೃದ್ಧಿಯಾಗುತ್ತದೆ. 'ಕಂಟಪತ್ರದ ಉಲುಹು ಕೆಡದಗ್ಗಳಿಕೆ, ಪದವಿಟ್ಟಳುಪದೊಂದಗ್ಗಳಿಕೆ' ಎಂಬ ಕುಮಾರವ್ಯಾಸನ ಮಾತು ಲಿಪಿಕಾರರಿಗಿರಬೇಕಾದ ಕೌಶಲ್ಯವನ್ನೇ ಕುರಿತು ಹೇಳಿದಂತಿದೆ.

ಕಂಟವನ್ನು ಆಯಕ್ಕೆ ತಕ್ಕಂತೆ ಹಿಡಿಯುವುದು ತನ್ನ ದೇಹದ ಇತರೆ ಭಾಗಗಳಿಗೆ ಚುಚ್ಚದಂತೆ ಎಚ್ಚರವಹಿಸುವುದು ಕಂಠದ ಸಂಪೂರ್ಣ ಭಾರವನ್ನು ಗರಿಗಳ ಮೇಲೆ ಬಿಟ್ಟು ಮುರಿಯದಂತೆ ಮಾಡಬಾರದು ಮತ್ತು ಹಿಂದಿನ ಪುಟದಲ್ಲಿ ನಕಲುಗೊಳಿಸಿದ ಅಕ್ಷರಗಳು ಅಳಿಸದಂತೆ ಅವುಗಳ ಅಂದವೂ ಕೆಡದಂತೆ ಅಕ್ಷರಗಳನ್ನು ಬರೆಯುವ ದೈಹಿಕ ಮತ್ತು ಮಾನಸಿಕ ಕೌಶಲ್ಯಗಳನ್ನು ಹೊಂದಿರಬೇಕಾಗುತ್ತದೆ.

**ಹಲವು ಭಾಷೆ ಮತ್ತು ಲಿಪಿಗಳ ಜ್ಞಾನ:-**

ಕನ್ನಡದ ಹಲವು ಹಸ್ತಪ್ರತಿಗಳಲ್ಲಿನ ಭಾಷೆ ಕನ್ನಡವೇ ಆಗಿರುವುದಿಲ್ಲ ಅಲ್ಲದೇ ಇತರೆ ಬೇರೆ ಬೇರೆ ಭಾಷೆಗಳಲ್ಲಿರುವುದೂ ಕಂಡು ಬರುವುದು ಉದಾಹರಣೆಗೆ ಕನ್ನಡ ಲಿಪಿಯ ಹಸ್ತಪ್ರತಿಗಳ ಭಾಷೆ ತೆಲುಗು, ಸಂಸ್ಕೃತ, ತಮಿಳಿನಲ್ಲಿರುವುದು ಸಾಮಾನ್ಯ ಸಂಗತಿಯಾಗಿದೆ ಹಲವಾರು ಜ್ಯೋತಿಷ್ಯ ಆಯುರ್ವೇದ, ವೈದ್ಯಕ್ಕೆ ಸಂಬಂಧಿಸಿದ ಗ್ರಂಥಗಳು ಕನ್ನಡ ಲಿಪಿಯಲ್ಲಿದ್ದರೂ ತೆಲುಗು ಭಾಷೆಯಲ್ಲಿವೆ ಮತ್ತೆ ಕೆಲವೊಂದು ಎರಡು ಭಾಷೆಗಳಲ್ಲಿರುತ್ತವೆ ಅದ್ದರಿಂದ ಲಿಪಿಕಾರ ಹೆಚ್ಚು ಭಾಷೆಯ ಮತ್ತು ಲಿಪಿಗಳ ಜ್ಞಾನವನ್ನು ಹೊಂದಿದ್ದಾರೆ ಪ್ರತೀಕರಣಕ್ಕೆ ಇನ್ನೂ ಹೆಚ್ಚಿನ ಅನುಕೂಲವಾಗುತ್ತದೆ. ಮತ್ತು ಕಾಕಲಿಪಿ, ದುರ್ಲಿಪಿ, ಮೋಡಿಲಿಪಿಗಳ ಬಗ್ಗೆಯೂ ಅರಿವಿರಬೇಕಾಗುತ್ತದೆ. ಉದಾ: (ಓ.ಗ್ರ೯೪೪) ರ ಪ್ರತಿಷ್ಠಾನದ ಸಂಗ್ರಹದ 'ತರ್ಕಸಂಗ್ರಹದೀಪಿಕಾ' ವನ್ನು ಲಿಖಿಸಿದ ಪ್ರತಿಕಾರನು ಸಂಸ್ಕೃತ, ಕನ್ನಡ, ತಮಿಳು, ನಾಗರಿ ಭಾಷೆಯ ಬಗ್ಗೆ ಪಾಂಡಿತ್ಯವನ್ನು ಹೊಂದಿದ್ದನೆಂಬುದು ತಿಳಿದು ಬರುತ್ತದೆ.

**ಕರಕುಶಲತೆ ಮತ್ತು ಅವಧಾನ:-**

ಓಲೆಗರಿಗಳ ಮೇಲೆ ಅಕ್ಷರಗಳನ್ನು ಕೊರೆಯುವುದು ಒಂದು ಕೌಶಲ್ಯ ಅಲ್ಲದೇ ತಾಳೆಗರಿಗಳನ್ನು ನಯಗೊಳಿಸುವ ಉದ್ದಳತೆಗೆ ತಕ್ಕಂತೆ ರಂದ್ರಗಳನ್ನು ಕೊರೆಯುವ, ವರ್ಣರಂಜಿತ ಚಿತ್ರಗಳನ್ನು ಬಿಡಿಸುವ ಮೊದಲಾದ ಕುಶಲ ಕಲೆಯನ್ನು ಲಿಪಿಕಾರ ಹೊಂದಿರಬೇಕಾಗುತ್ತದೆ ಅಲ್ಲದೆ ಹಸ್ತಪ್ರತಿಗಳು ನಮ್ಮ ಜೀವನದ .ಒಂದು ಭಾಗ ಎಂದು ತಿಳಿಯುವ ಅವಧಾನವಿರಬೇಕಾಗುತ್ತದೆ.

"ಬರೆಯತೊಡಗಿದರೆ ತಪ್ಪು ಬರೆದಿರೆ ಬರೆದದೋಷವದಾರ್ಗೆ ಕಂಟಕೋ ಬರೆದ ಬೆರಳಿಗೋ ಕೇಳ್ವ ಕರ್ಣಕೋ" ಎಂಬ ಪ್ರತಿಕಾರದ ಮಾತು ಮನಸ್ಸು ಮತ್ತು ದೇಹದ ಏಕಾಗ್ರತೆಯನ್ನು ಸೂಚಿಸುತ್ತವೆ. ೨೬

**ಸಾಕಷ್ಟು ವಿದ್ವತ್ತು ಮತ್ತು ಅಚ್ಚುಕಟ್ಟುತನ:-**

ಲಿಪಿಕಾರರು ಮುದ್ರಣ ಯಂತ್ರಗಳಿಗೆ ಅಕ್ಷರಗಳನ್ನು ಜೋಡಿಸುವ ಅಚ್ಚುಕೂಟದ ಪ್ರಮಾಣಿಕ ಸಿಬ್ಬಂದಿಯಂತೆ ತಮ್ಮ ವಿದ್ವತ್ತು ಶ್ರಮವನ್ನು ವ್ಯಯಮಾಡಿ ತಮ್ಮ ನಕಲು ಕಾರ್ಯವನ್ನು ಅಚ್ಚುಕಟ್ಟಾಗಿ ನಿರ್ವಹಿಸಬೇಕಾಗುತ್ತದೆ.

ಕವಿಯ ಮೂಲಕೃತಿಯನ್ನು ಪ್ರತಿ ಮಾಡುವಾಗ ಕೆಲವೊಮ್ಮೆ ಅದರ ಬಾಹ್ಯಜ್ಞಾನಕ್ಕಿಂತ ಆಂತರ್ಯಕ್ಕೆ ಹೆಚ್ಚು ಪ್ರಾಶಸ್ತ್ಯನೀಡಬೇಕು ಶ್ರೇಷ್ಠ ದರ್ಜೆಯ ಪ್ರತಿಕಾರನು ಲಿಪಿಶಾಸ್ತ್ರಜ್ಞನಾಗಿರುವುದರ ಜೊತೆಗೆ ಉತ್ತಮ ಜ್ಞಾನ, ಪ್ರತಿಭೆ, ವಿವೇಚನಾಶಕ್ತಿಗಳಿಂದ ಕೂಡಿದ ವಿಚಾರಪರನಾಗಿರಬೇಕು. ಮೂಲ ಗ್ರಂಥದಲ್ಲಿರುವ ತಪ್ಪುಗಳನ್ನು ಹಾಗೆಬಿಡದೆ ಸರಿಯಾದುದನ್ನು ಸೂಚಿಸುವ ಲಿಪಿಕಾರರಲ್ಲಿಯೂ ಮೇಧಾವಿಗಳು ಪ್ರತಿಭಾ ಸಂಪನ್ನರು ಇದ್ದರೆಂಬುದಕ್ಕೆ ಬಹಳಷ್ಟು ಆಧಾರಗಳಿವೆ.

**ಸತತ ಅಧ್ಯಯನ ಶೀಲತೆ:-**

ಲಿಪಿಕಾರರ ಸತತ ಅಧ್ಯಯನ ಶೀಲತೆಯಲ್ಲಿ ವಿದ್ಯಾರ್ಥಿಗಳಂತಿರಬೇಕಾಗುತ್ತದೆ ಅಲ್ಲದೆ ತಾನು ಹಿಡಿದ ಕಾರ್ಯ ಪರಿಪೂರ್ಣಗೊಳ್ಳಬೇಕಾದರೆ ಅಕ್ಷರ ಜ್ಞಾನದ ಜೊತೆಗೆ ನಿರಂತರ ಅಧ್ಯಯನ ಶೀಲತೆಯೂ ಇರಬೇಕಾಗುತ್ತದೆ.

ಹಸ್ತಪ್ರತಿಗಳೊಡನೆ ಕಾರ್ಯನಿರ್ವಹಿಸುವ ಪ್ರತಿಕಾರನಿಗೆ ಹತ್ತು ಹಲವು ವಿಷಯಗಳ ಪರಿಜ್ಞಾನ ಇರಬೇಕಾಗುತ್ತದೆ. ಏಕೆಂದರೆ ಯಾವ ಭಾಷೆಯ, ಲಿಪಿಯ ಹಸ್ತಪ್ರತಿಗಳು ದೊರೆತರೂ ಅದನ್ನು ಯಥಾವತ್ತಾಗಿ ಅರ್ಥಮಾಡಿಕೊಂಡು ಪ್ರತಿಮಾಡಬೇಕಾಗುತ್ತದೆ.

ಉದಾ:- ಜ್ಯೋತಿಷ್ಯದ ಪ್ರತಿಗಳು ಸಿಕ್ಕಾಗ ಅದರ ಬಗ್ಗೆ ಪ್ರಾಥಮಿಕ ಮಾಹಿತಿಗಳು, ವಾಸ್ತು ಶಿಲ್ಪದ ಪ್ರತಿಗಳು ಸಿಕ್ಕಾಗ ಅದರ ಬಗ್ಗೆ ಅಲ್ಪಮಟ್ಟಿಗೆ ಅರಿವಿರಲೇ ಬೇಕಾಗುತ್ತದೆ.

ಒಟ್ಟಾರೆಯಾಗಿ ಲಿಪಿಕಾರರು ಒಂದು ವೇಳೆ ಅನಾಕ್ಷರಸ್ಥರಾಗಿದ್ದರೂ ಅಜ್ಞಾನಿಗಳಾಗಿರ ಬಾರದು, ನಿರ್ಮಲ ಮನಸ್ಸು, ಕ್ರಿಯಾಶೀಲಗುಣ, ವಿಶಾಲದೃಷ್ಟಿಕೋನ ಇವೆಲ್ಲಕ್ಕಿಂತ ಮಿಗಿಲಾಗಿ ಹೃದಯ ಸಂಸ್ಕಾರ ಗುಣವುಳ್ಳವರಾಗಿರಬೇಕು .

### ಉ) ಲಿಪಿಕಾರರ ಆದರ್ಶ

ಮೂಲ ಪ್ರತಿಯಿದ್ದಂತೆ ಬರೆಯುವುದು ಲಿಪಿಕಾರನ ಮೂಲ ಆದರ್ಶ. "ಲಿಪಿಕಾರರು ಹೇಳುವ 'ಇದ್ದ ಹಾಗೆ' 'ಅದೇ ಪ್ರತಿ' 'ಪ್ರತಿಯಿದ್ದಹಾಗೆ'. ಇದರೊಳಗೇನಾದರೂ ಅಕ್ಷರಗಳು ಚದರಿದ್ದರೆ ವಿನಯ ಜನರೊಲಿದೋದಿ ತಿದ್ದಿ ಕೀರ್ತಿಯ ಪಡೆದು ಮನಕೆ ಸಂತಾಸಬ ತಾಳಿ ಮುದದಿ ತಪ್ಪುಳ್ಳರೆ ತಿದ್ದುವುದು. ಎಂಬ ಮಾತುಗಳು ಇವರ ಬರವಣಿಗೆಯ ಪ್ರಮಾಣಿಕತೆಯನ್ನು ವಿನಯಶೀಲತೆಯನ್ನು ಪ್ರತಿನಿಧಿಸುತ್ತವೆ ಅಲ್ಲದೇ ಗುರುಗಳ ಹತ್ತಿರವಿದ್ದು ಹಸ್ತಪ್ರತಿ ಲೇಖನ ವಿದ್ಯೆ ಕಲಿಯುತ್ತಿದ್ದ ವಿಷಯವನ್ನು 'ವಿದ್ಯಾಗುರುಬೊಮ್ಮಣ್ಣ ಕವಿಗಳ ವರಪಾದವೇ ಶರಣು' ದ್ರಾವಿಡದೇಶ ಅಪ್ಪಣ್ಣ ವಿದ್ಯಾರ್ಥಿ ಎಂಬ ಉಲ್ಲೇಖಗಳು ಅವರ ಆದರ್ಶ ಮತ್ತು ವಿನಯವಂತಿಕೆಯನ್ನು ತಿಳಿಸುತ್ತವೆ. ೨೭

ವಿವಿಧ ಬಗೆಯ ಲಿಪಿಕಾರರು ಕವಿಯ ಪ್ರತಿಯಿದ್ದಂತೆ ನಕಲುಗೊಳಿಸಿರುವುದಾಗಿ ಹೇಳಿಕೊಂಡಿದ್ದಾರೆ ಅದರೂ ಕೆಲವೊಮ್ಮೆ ವೇಗ ಬರವಣಿಗೆ, ಮರೆವು, ಸೋಮಾರಿತನದಿಂದಾಗಿ ಹಲವಾರು ತಪ್ಪುಗಳು ಹಸ್ತಪ್ರತಿಗಳಲ್ಲಿ ಆಡಗಿರುವುದುಂಟು ಇವು ನಂತರದಲ್ಲಿ ಮತ್ತೆ ಮತ್ತೆ ಪ್ರತಿನಕಲುಗಳಾಗುತ್ತಾ ಸಾಗಿದಾಗ ಪ್ರತಿಕಾರರು ಇವುಗಳಲ್ಲಿ ತಪ್ಪುಗಳು ಸಂಭವಿಸದಂತೆ ಎಚ್ಚರವಯಿಸಿದ್ದೇವೆಂಬ ಆದರ್ಶವ್ರತವನ್ನು ಲಿಪಿಕಾರರು ಎತ್ತಿಹಿಡಿದಿದ್ದಾರೆ.

ಹಸ್ತಪ್ರತಿಗಳನ್ನು ಪ್ರತಿಮಾಡುವ ಕಾರ್ಯ ಕಷ್ಟಕರವಾದರೂ ಬಹಳಷ್ಟು ಜನ ಪ್ರತಿಕಾರರು ತಮ್ಮ ಹೆಸರನ್ನು ಎಲ್ಲಿಯೂ ಹೇಳಿಕೊಳ್ಳದೆಯೆ ತಮ್ಮ ಕರ್ತವ್ಯ ನಿಷ್ಠೆಯನ್ನು ಸಾಧಿಸಿ ಪ್ರತಿಗೊಳಿಸಲು ಪ್ರಭಾವಬೀರಿದ ಪಂಡಿತರುಗಳನ್ನು ಸ್ಮರಿಸಿದ್ದಾರೆ, ಮತ್ತು "ತಪ್ಪಂಬರದಾತಂ ಕಡುಜಡನಪ್ಪಾತನೆಂದು ಬಯಲ್ಬೇಡ" ಎಂದು ತನ್ನ ಜಡ ಬುದ್ದಿಯಿಂದ ಆದ ಪ್ರಮಾದಕ್ಕೆ ಬರಹಗಾರ ಭಿನ್ನವಿಸಿಕೊಳ್ಳುವುದು" ೨೮ ಅವನ ಪ್ರಮಾಣಕತೆಯನ್ನು ತಿಳಿಸುತ್ತದೆ.

ಲಿಪಿಕಾರನು ಹಸ್ತಪ್ರತಿಗಳ ಕೊನೆಯಲ್ಲಿ ಬರೆಸಿದಾತನಿಗೆ ಶುಭಕೋರುವುದು ಪ್ರತಿಮಾಡುವಾಗ ಯಾವುದೇ ನಿರ್ವಿಘ್ನಬಾರದಂತೆ ಪ್ರಾರಂಭದಲ್ಲಿ ದೈವಸ್ತುತಿ ಮಾಡುವುದು ಲಿಪಿಕರರ ಸ್ಮರಣಸ್ಮೃತಿಯನ್ನು ಪರಿಚಯಿಸಿದಂತಾಗುತ್ತದೆ.

ಪ್ರತಿಷ್ಠಾನದಲ್ಲಿ (೦೩೨) ರ ಲಕ್ಷ್ಮೀಶನ ಜೈಮಿನಿಭಾರತವನ್ನು ಪ್ರತಿಮಾಡಿದ ಲಿಪಿಕಾರ ಹೀಗೆ ಹೇಳಿಕೊಂಡಿದ್ದಾನೆ "ಅಂತುಸಂಧಿ೨ಳಕಾಂ ಪದನು ೭೦೦೦ ಕಾಂ ಮಂಗಳ ಮಹಾ ಶ್ರೀ ಶ್ರೀ ಬರಗಿಹಳ್ಳಿ ಲಕ್ಷ್ಮಿನರಸಿಂಹಾಯ ನಮಃ ಹಂದನಕೆರೆ ಚಿಬೀ ವಿಘ್ನೇಶ್ವರಾಯನಮಃಪೈಯಂಗಳ ಸಂವತ್ಸರ ಆಶ್ವೀಜ ಶುದ್ದ ೧ ತ್ತಿರವಾದ ಜಯಮಿನಿ ಪುಸ್ತಕ ಸಂಪೂರ್ನಂ

ತಪ್ಪಂಬರದಾತಂ ಕಡುಜಡ
ಮಪ್ಪಾತನು ಬರದನೆಂದು ಬೈಯಲಿ ಬೇಡಂ
ತಪ್ಪಕ್ಕು ಶುದ್ದ ಮಕ್ಕುಂ
ತಪ್ಪುಳ್ಳರೆ ತಿದ್ದಿ ಕೊಂಬುದುತ್ತುಮಪುರುಷರೂ॥
ವಾಚದೋಷಾ ನವಿದ್ಯತೆ ಗುರುವೆಗತಿ ೨೯

ಇಲ್ಲಿ ಲಿಪಿಕಾರರು ಮೂಲ ಪ್ರತಿಯಿದ್ದಂತೆ ಬರೆದಿದ್ದೇನೆ ಆದರೂ ಎಲ್ಲಿಯಾದರೂ ತಪ್ಪುಗಳು ಸಂಭವಿಸಿದ್ದರೆ ಓರೆಕೋರೆಗಳುಂಟಾಗಿದ್ದರೆ ಬುದ್ದಿವಂತರು ತಿದ್ದಿಕೊಳ್ಳಬೇಕೆಂದೂ ಪ್ರತಿಮಾಡಿದವರನ್ನು ಎಂದಿಗೂ ಬಯ್ಯಬಾರದೆಂದೂ ಭಿನ್ನವಿಸಿಕೊಂಡಿದ್ದಾರೆ.

"ಕಡಲಕೆರೆಯಲ್ಲಿ ಬೆಳೆಯುವ ತಾಳೆಯ ಮರವು ತಲೆ ಕೆದರಿಕೋಂಡು ಒಂಟಿಗಾಲಿನಲ್ಲಿ ನಿಂತು ಮೌನವ್ರತವನ್ನು ಅಚರಿಸುವ ಮುನಿಯಂತಿದ್ದಿತಂತೆ ಅಲೇಖಗಳನ್ನು ಜೋಡಿಸಿ, ಮೇಲೊಂದು ಕೆಳಗೊಂದು ತಳುವಲಗೆಗಳನ್ನು ಇಟ್ಟು ಕಟ್ಟಿರುವುದು ಎಂಟು ಮೂಲೆ ಎಂಟು ಲೋವೆಗಳುಳ್ಳ ದೇವಾಲಯವಂತೆ.ಅಷ್ಟು ಚೆಲುವಾಗಿರುವ ದಿವ್ಯ ಶಿವಾಲಯ ಬರಿದಾಗಿರಬಾರದೆಂದು ಚಿಕ್ಕಯ್ಯನವರು "ಬಿಂದು ವಿಸರ್ಗ ದಡ್ಡತೆವೊಂದಿದಾವೃತೋರ್ದ್ವರೇಫೆ ದೀರ್ಘಹ್ರಸ್ವದಿಂದೊಪ್ಪುತಿರ್ದ ಅಕ್ಷರ ಮೂರ್ತಿಗಳಂ ಲೇಖನವಂ ಮಾಡೆಂದು" ಅದನ್ನು ಷಟ್ಸ್ಥಲಜ್ಞಾನ ಸಂಪನ್ನರಾದ ತಮ್ಮ ಕೈಯಲ್ಲಿ ಇಟ್ಟರಂತೆ. ಲೇಖಕನು ತಾನು ಪ್ರತಿ ಮಾಡುವವನು ಎಂದು ಬಣ್ಣಿಸಿಕೊಂಡಿಲ್ಲ "ಇಂತೀ ಶವಗಣಂಗಳ ನಿರೂಪವಂ ಕೈಗೊಂಡು ಬರೆವುದಕ್ಕೆ "ತನ್ನ ಕಣ್ಣು, ನಾಲಗೆ, ಕೈ, ಕಿವಿ, ಗತಿ, ಚೈತನ್ಯಕ್ಕೆ" ಸದ್ಭಕ್ತ ವೀರಮಹೇಶ್ವರರುಗಳೇ ಕರ್ತರೆಂದೂ ಅವರ ಕರುಣ ಪ್ರಸಾದವಂ ಕೈಕೊಂಡು ಬರೆದನಲ್ಲದೆ ನನ್ನಚ್ಚೆಯಳು ನಾಂ ಬರೆದುದಿಲ್ಲ ಎಂದೂ ತನ್ನ ಸಮರ್ಪಣಾಭಾವವನ್ನು ವ್ಯಕ್ತಪಡಿಸುತ್ತಾನೆ. ೩೦

ಪ್ರತಿಕಾರರು ಹಸ್ತಪ್ರತಿಗಳನ್ನು ನಕಲುಗೊಳಿಸಿ ಕೊನೆಯಲ್ಲಿ ತಂತಮ್ಮ ವಿಳಾಸಗಳನ್ನು ಕೊಡುವುದರ ಜೊತೆಗೆ ಕೆಲವರು ತಿಥಿ ವಾರ, ನಕ್ಷತ್ರಗಳನ್ನು ಕೊಟ್ಟಿದ್ದಾರೆ ಅಲ್ಲದೇ ತಪ್ಪಿದ್ದರೆ ತಿದ್ದುಕೊಳ್ಳಿ ಎಂದು ಹೇಳುವ ವಿನಯವಂತಿಕೆಯೂ ಇದೆ.

ಹೀಗೆ ನಕಲು ಕಾರ್ಯಮಾಡುವಲ್ಲಿ ವಹಿಸಿದ ಶ್ರಮ ಮತ್ತು ಇಂದು ಅವುಗಳನ್ನು ಉಳಿಸಿ ಬೆಳೆಸುವಲ್ಲಿ ತೋರಬೇಕಾದ ಎಚ್ಚರಿಕೆಗಳು ಹಲವು ತಪ್ಪುಗಳನ್ನು ತಿದ್ದಿಕೊಳ್ಳಿ ಎಂದು ಕೇಳಿಕೊಂಡಿರುವ ಮನವಿ ಮತ್ತು ಅತಿವಿನಯತೆ ಇಂತಹ ಹಲವು ಆದರ್ಶಗಳನ್ನು ಪ್ರತಿಕಾರರಲ್ಲಿ ಕಾಣಬಹುದು.

"ಈ ಪ್ರತಿಕಾರರೇ ನಮ್ಮ ಪ್ರಾಚೀನ ಸಾಹಿತ್ಯ-ಸಂಸ್ಕೃತಿವಾಹಕರು ಅವರು ತೋರಿದ ನಿಷ್ಠೆ, ಶ್ರಮ, ಶ್ರದ್ದೆಗಳೇ ಇಂದಿನ ಜೀವಾಳ. ಅವರ ತಪ್ಪುಗಳು ತಪ್ಪುಗಳಲ್ಲ. ಅವರ

ಮೂಲಪ್ರತಿಗಳ ರೂಪಗಳು. ಅದರಲ್ಲಿರುವ ತಪ್ಪುಗಳಿಗೆ ಅವರು ಹೊಣೆಯಲ್ಲ. ಆದ್ದರಿಂದ ಅವರೆಂದೂ ಮೂಲಕ್ಕೆ ನ್ಯಾಯಒದಗಿಸುವ ನ್ಯಾಯದೇವತೆಗಳೇ ವಿನಃ ಪಕ್ಷಪಾತಿಗಳಲ್ಲ. ಆದರಿಂದ ಇವರೆಂದಿಗೂ ದೂಷ್ಯರಲ್ಲ ಪೂಜ್ಯರು" ಎಂಬ ಡಾ॥ ನಾ.ಗೀತಾಚಾರ್ಯರ ಮಾತು ಲಿಪಿಕಾರರ ಮಹತ್ವದ ಮಾತಾಗಿರುತ್ತದೆ.

### ಊ) ಲಿಪಿಕಾರರ ದೌರ್ಬಲ್ಯ

ಲಿಪಿಕಾರರ ದೌರ್ಬಲ್ಯಗಳನ್ನು ನಾವು ಹೀಗೆ ಇವೆ ಅಥವಾ ಇಂತಿಷ್ಟೇ ಇವೇ ಎಂದು ಸಮಗ್ರವಾಗಿ ಪಟ್ಟಿಮಾಡಿ ತೋರಿಸುವುದು ಅಸಾಧ್ಯವಾದ ಕೆಲಸವಾಗಿದೆ. ಆದರೂ ಪ್ರತಿಕಾರರ ಅನುಭವ, ವಿದ್ಯಾಭ್ಯಾಸ, ಆಸಕ್ತಿ, ಸಂಸ್ಕಾರಗಳಿಗನುಗುಣವಾಗಿ ಲಿಪಿಕಾರರ ದೌರ್ಬಲ್ಯಗಳ ಸಂಖ್ಯೆಯೂ ಏರುಪೇರಾಗುತ್ತವೆ. ಯಾವುದೇ ಮುದ್ರಣ ಸೌಕರ್ಯವಿಲ್ಲದಿದ್ದ ಕಾಲದಲ್ಲಿ ಪ್ರಾಚೀನ ಕೃತಿಗಳ ಹಲವಾರು ಪ್ರತಿಗಳನ್ನು ಲಿಪಿಕಾರರು ಪ್ರತಿಮಾಡುವಾಗ ಅಜ್ಞಾನದಿಂದ ಕೆಲವೊಂದು ತಪ್ಪು, ದೋಷಗಳು ಉಂಟಾಗುತ್ತಿದ್ದುದ್ದು ಸಾಮಾನ್ಯ ಸಂಗತಿಯಂತೆ ತೋರುತ್ತದೆ.

"ಲಿಪಿಕಾರರು ಕವಿ ಪ್ರತಿಗಳನ್ನು ನಕಲು ಮಾಡುವಾಗ ಕೈತಪ್ಪುಗಳೇ ಮೂಲ ಕೃತಿಯಿಂದ ಭಿನ್ನವೆನ್ನುವಷ್ಟು ಕಂಡು ಬರುತ್ತವೆ. ಅಲ್ಲದೇ ಸರ್ವಜ್ಞ ಎಂಬ ಅಂಕಿತವನ್ನು ಹಾಕದೆ 'ಪರಮಾರ್ಥ' ಎಂಬ ಮುದ್ರಿಕೆ ಹಾಕಿ ನಕಲುಗೊಳಿಸಿದ ಸರ್ವಜ್ಞನ ವಚನಗಳು ಸಮಸ್ಯೆಯಾಗಿನಿಂತು ಸರ್ವಜ್ಞ ಕವಿಯ ವಿಷಯಕ್ಕೆ ಬಿಸಿಬಿಸಿ ಚರ್ಚೆಯಾಗುವಂತಾಯಿತು. ೩೧ ಎಂಬ ಮಾತು ವಿಚಾರಣೀಯವಾಗಿದೆ. ವಾಸ್ತವವಾಗಿ ಇದು ದೋಷವಾಗದೆ ಗುಣವಾಗುತ್ತದೆ. ಇದರಿಂದ ಹೊಸ ಚರ್ಚೆಯಾಗಿದೆ. ಕವಿ ಕೃತಿ ವಿಚಾರಕ್ಕೆ ಹೊಸ ಆಯಾಮ ದೊರಕಿದೆ ಎಂಬ ಡಾ॥ನಾ.ಗೀತಾಚಾರ್ಯರ ಅಭಿಪ್ರಾಯವನ್ನು ಇಲ್ಲಿ ಗಮನಿಸಬಹುದು.

ಯಾವುದಾದರೂ ಒಂದು ಹಸ್ತಪ್ರತಿಯನ್ನು ಮೂಲವಾಗಿಟ್ಟುಕೊಂಡು ಮತ್ತೊಂದು ಪ್ರತಿಯನ್ನು ಸಿದ್ಧಪಡಿಸುವಾಗ ಲಿಪಿಕಾರನು ಸಾಮಾನ್ಯವಾಗಿ ಕಾಗುಣಿತ ತಪ್ಪುಗಳನ್ನು ಮಾಡುತ್ತಾನೆ. ಪ್ರತಿಕಾರನು ಎಷ್ಟೇ ಮುಂಜಾಗ್ರತೆ ವಹಿಸಿದ್ದರೂ ಅವನಿಗರಿವಿಗೆ ಬಾರದೆ ಕಣ್ತಪ್ಪು, ಕಿವಿತಪ್ಪು ಕೈತಪ್ಪುಗಳು ಸಂಭವಿಸಿಯೇ ತೀರುತ್ತವೆ. ಇಂತಹವುಗಳಲ್ಲಿ ಕೆಲವೊಂದನ್ನು ದೋಷಗಳೆಂದು ಭಾವಿಸಬಾರದೆಂದು ಹಲವು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

'ನಡೆವವರೆಡವರಲ್ಲದೆ ಕುಳಿತು ಕೊಂಡಿರುವವರು ಎಡವುವರೆ'? ಹಾಗೇ ಬರೆಯುವವರು ತಪ್ಪು ಮಾಡುತ್ತಾರಲ್ಲದೇ ಬರೆಯದೇ ಇರುವವರು ತಪ್ಪುಮಾಡುತ್ತಾರೆಯೇ? ಹಾಗೆ ಪ್ರತಿಮಾಡುವವನು 'ಆನತ' ಎಂಬುದನ್ನು 'ಆತನ' ಎಂದು

ಪ್ರತಿ ಮಾಡಿದರೆ ಮೂಲ ಪ್ರತಿಯನ್ನು ಬರೆದವನು ಆ ತಪ್ಪುಮಾಡಿದ್ದಾನೆಂದು ಹೇಳದೆ ಇದು ಪ್ರತಿಲಿಪಿಕಾರನ ದೋಷವೇ ಹೊರತು ಕವಿಯದಲ್ಲ ಎಂದು ತಿಳಿಯಬೇಕಾಗುತ್ತದೆ.

ಪ್ರತಿಮಾಡುವ ಕಾರ್ಯಕವೇ ಒಂದು ಸ್ಪರ್ಧೆಯಾಗಿ ಅಥವಾ ಹೆಚ್ಚು ಸಂಭಾವನೆ ಪಡೆಯುವ ಸಲುವಾಗಿಯೋ ಮತ್ತು ಪ್ರತಿಕಾರನ ಹೊಣೆಗೇಡಿತನ, ಕಿಡಿಗೇಡಿತನದಿಂದಲೋ ಕೆಲವೊಂದು ವ್ಯತ್ಯಾಸಗಳು ಕಂಡುಬಂದಿವೆ. ಎಂಬ ಒಂದು ಮತವಿರುವಂತೆಯೇ ಇದನ್ನು ನಿರಾಕರಿಸುವ ಇನ್ನೊಂದು ಮತವಿದ್ದು ವಿಚಾರಯೋಗ್ಯವಾಗಿದೆ. ಲಿಪಿಕಾರರಲ್ಲಿ ಎಂದಿಗೂ ಹೊಣೆಗೇಡಿತನವಾಗಲೀ, ಸೋಮಾರಿತನವಾಗಲೀ, ಕಿಡಿಗೇಡಿತನವಾಗಲೀ ಇರುತ್ತಿರಲಿಲ್ಲ. ಅವರಿಗಿದ್ದ ಕೃತಿನಿಷ್ಠ ಜಾಗೃತಿ ಪ್ರಶ್ನಾತೀತ ಅದೇನಿದ್ದರೂ ವ್ಯಕ್ತಿ ಸಹಜ ದೋಷವೇ ವಿನಾ ಪ್ರಜ್ಞಾಪೂರ್ವಕವಾಗಿರುವುದಿಲ್ಲ. ಹೀಗಿದ್ದೂ ಆದೋಷದ ಮರ್ಮವನ್ನರಿಯದೇ ಅವರನ್ನು ದೋಷಿಸುವ ನಾವೇ ದೋಷಕಾರರಾಗುತ್ತೇವೆ ಎಂಬ ಡಾ||ನಾ.ಗೀತಾಚಾರ್ಯರ ಮಾತನ್ನು ನೆನಪಿಸಿಕೊಳ್ಳಬಹುದು.

ಶ್ರೇಷ್ಠ ಲಿಪಿಕಾರನೂ ಸಹ ತನ್ನ ಬುದ್ಧಿ ಕೌಶಲ್ಯವನ್ನು ಪ್ರದರ್ಶಿಸುವ ಇಂಥದೇನನ್ನಾದರೂ ಮಾಡದೆ ಬಹುಕಾಲ ಯಾಂತ್ರಿಕವಾಗಿ ನಕಲು ಮಾಡಲಾರ. ಹಸ್ತಪ್ರತಿಗಳಲ್ಲಿ ಕಾಣುವ ಪಾಠದೋಷಗಳು ಸ್ವ ಹಸ್ತಪ್ರತಿಯ ಕಾಲದಿಂದಲೇ ಬಂದಿರಬಹುದು, 'ಹೋಮರನೂ ತೂಕಡಿಸುತ್ತಾನೆ' (Quandoque bonus dormitat) ಎಂಬ ನಾಣ್ನುಡಿ ಸ್ವ ಹಸ್ತಪ್ರತಿಯ ದೋಷಗಳ ಲಕ್ಷಣವನ್ನು ತಿಳಿಸುತ್ತವೆ. ೩೨

ಏಕೆಂದರೆ ಮೂಲ ಕವಿ ಮನೋದೃಷ್ಠಿ ಒಂದು ತರಹವಿದ್ದರೆ ಲಿಪಿಕಾರನದ್ದು ಬೇರೆಯತರಹದ್ದೇ ಆಗಿರುವುದು ದೋಷಗಳಿಗೆ ಕಾರಣವಾಗಿರಲು ಬಹುದು.

ಮಲಯೆಲರಲೆಪುಂ ಮನಸಿಜ
ನಲೆಪುಂ ಕೋಗಿಲೆ ಜಡಿಪುವೂಡನೆಗಳ್ಪಿನಮೇ
ನಲಮೆ ನಲಜಡಿಯಾದಂತಿರ್ಪುವ
ಗಲದಾ ವನಲತೆಯ ಜೊಂಪದೊಳ್ ದಂಪತಿಗಳ್ (ಅಜಿಪು.೨-೧೪) ೩೩

ಇಲ್ಲಿ ಮೂರನೇಯ ಸಾಲಿನಲ್ಲಿ 'ನಲಮೆ' ಎಂಬ ಮೂರಕ್ಷರಗಳು ಅಧಿಕವಾಗಿವೆ ಅವುಗಳನ್ನು ಬಿಟ್ಟರೆ ಪದ್ಯ ಛಂದಸ್ಸಿನ ದೃಷ್ಟಿಯಿಂದಲೂ ಅರ್ಥದ ದೃಷ್ಠಿಯಿಂದಲೂ ಸರಿ ಹೊಂದುತ್ತದೆ.

ಕೆಲವು ಪ್ರತಿಕಾರರು ಪ್ರತಿಭಾವಂತರಿದ್ದಾರೆ ಪ್ರತಿ ಮಾಡುವ ಸಮಯದಲ್ಲಿ ತಮ್ಮದಷ್ಟನ್ನು ಸೇರಿಸುತ್ತಾ ಹೋಗುವರು ಇದರಿಂದಾಗಿ ಉಂಟಾಗುವ ಪ್ರಮಾದಗಳಿಗೆ ಕನ್ನಡ ಸಾಹಿತ್ಯದಲ್ಲಿ ಲೆಕ್ಕವಿಲ್ಲ ಪ್ರತಿಕಾರನಿಗೆ ಅದು ಹೆಮ್ಮೆಯ ವಿಷಯವಾಗಿರುತ್ತದೆ ಆದರೆ ಸತ್ಯಕ್ಕೆ ಪೆಟ್ಟುತಾಗಿರುತ್ತದೆ. ಇದು ಗ್ರಂಥ ಸಂಪಾದನೆಯ ದೃಷ್ಠಿಯಿಂದ ದೋಷವಾದರೂ

ಹಸ್ತಪ್ರತಿ ಅಧ್ಯಯನ ದೃಷ್ಠಿಯಿಂದ ಗುಣವಾಗುತ್ತಧೆಂದು ಡಾ॥ನಾ.ಗೀತಾಚಾರ್ಯರು ಹೇಳುತ್ತಾರೆ. ಇಂಥ ದೋಷಗಳು ವಾಸ್ತವವಾಗಿ ಹಸ್ತಪ್ರತಿಗಳ ಸಾಂಸ್ಕೃತಿಕ ಸಂಗತಿಗಳಾಗಿರುತ್ತವೆ. ಬದಲಿ ಪಾಠಗಳು ಆಯಾ ಲಿಪಿಕಾರರ ಕೃತಿಗ್ರಹಿಕೆಯ ಉದಾಹರಣೆಗಳಾಗುತ್ತವೆ. ಲಿಪಿಕಾರರು ಇಲ್ಲಿ ಓದುಗರಾಗಿ ಕೃತಿ ವಿಮರ್ಶೆಮಾಡಿರುವ ತಮ್ಮ ಅರ್ಥದೃಷ್ಠಿ ದಾಖಲಿಸಿರುವ ದ್ಯೋತಕವಾಗಿದೆ. ಪ್ರತಿಕಾರರ ಒಂದೊಂದು ಪಾಠವೂ ಭಿನ್ನ ಓದಿನ ಮಾದರಿಗಳಾಗಿ ನಿಲುತ್ತವೆ ಎಂಬ ಮಾತು ಸೂಕ್ತವಾಗಿದೆ.

---

## ಅಡಿ ಟಿಪ್ಪಣಿ

೧. ಡಾ.ಎಂ.ಎಂ.ಕಲಬುರ್ಗಿ : ಕನ್ನಡ ಗ್ರಂಥ ಸಂಪಾದನಾಶಾಸ್ತ್ರ, ಸಮಾಜಪುಸ್ತಕಾಲಯ, ಧಾರವಾಡ. ಪುಟ-೬೦ ೧೯೭೨

೨. ಎಂ.ವಿಸೀತಾರಾಮಯ್ಯ : ಕನ್ನಡ ಹಸ್ತಪ್ರತಿಶಾಸ್ತ್ರ ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ ಪುಟ-೧೪- ೧೯೮೩

೩. ಬಿ.ಆರ್.ಹೀರೆಮಠ : ಸಾಧನೆ(ಬೆಂ.ವಿ.ವಿ.) ಪುಟ-೩೭ (೧೨-೦೨-೧೯೮೩)

೪. ಡಾ.ವೀರೇಶಬಡಿಗೇರ : ಹಲಗೆ ಬಳಪ, ಮಯಾ ಪ್ರಕಾಶನ, ಕಮಲಾಪುರ ಪುಟ-೧೪- ೨೦೦೫

೫. ಬಿ.ಕೆ.ಹಿರೇಮಠ : ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ, (ಪಿಹೆಚ್‌ಡಿ.ಪ್ರಬಂಧ ) ವೀರಶೈವ ಅಧ್ಯಯನ ವೇದಿಕೆ, ಕಸಬಾ, ಜಂಬಗಿ. ೧೯೯೨

೬. ಎಂ.ವಿಸೀತಾರಾಮಯ್ಯ : ಕನ್ನಡ ಹಸ್ತಪ್ರತಿಶಾಸ್ತ್ರ ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ. ಪುಟ-೧೬- ೧೯೮೩

೭. ಡಾ॥ ಸಿದ್ದಯ್ಯ ಪುರಾಣಿಕ, ಡಾ॥ ಆರ್ ಶೇಷಶಾಸ್ತ್ರೀ. ಎಂ.ವಿ.ಸೀತಾರಾಮಯ್ಯ, ಮಣಿಹ ಬಿ.ಎಂ.ಶ್ರೀ.ಪ್ರತಿಷ್ಠಾನ (ಪಗು ಹಳಕಟ್ಟಿ ಸಂಸ್ಮರಣ ಸಂಪುಟ) ಪುಟ-೧೮೪, ೧೯೫

೮. ಎಂ.ವಿಸೀತಾರಾಮಯ್ಯ : ಕನ್ನಡ ಹಸ್ತಪ್ರತಿಶಾಸ್ತ್ರ ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ ಪುಟ-೧೭- ೧೯೮೩

೯. ಬಿ.ಕೆ.ಹಿರೇಮಠ : ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ, (ಪಿಹೆಚ್‌ಡಿ.ಪ್ರಬಂಧ ) ವೀರಶೈವ ಅಧ್ಯಯನ ವೇದಿಕೆ, ಕಸಬಾ, ಜಂಬಗಿ. ೧೯೯೨

೧೦&೧೧. ಬಿ.ಆರ್.ಹೀರೆಮಠ : ಸಾಧನೆ(ಬೆಂ.ವಿ.ವಿ.)(೧೨-೦೨-೧೯೮೩) ಪುಟ-೩೮

೧೨, ೧೩, ೧೪, ಹೆಚ್.ದೇವಿರಪ್ಪ : ಕನ್ನಡ ಹಸ್ತಪ್ರತಿಗಳ ಇತಿಹಾಸ. ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು. ಪುಟ-೪೬-೧೯೯೯

೧೫. ಕೆಳದಿ ಗುಂಡಾಜೋಯಿಸ್ ಮತ್ತು ಡಾ॥ನಾ.ಗೀತಾಚಾರ್ಯ: ಬಿ.ಎಂ.ಶ್ರೀ.ಪ್ರತಿಷ್ಠಾನದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಪುಟ-೭೦-೧೯೮೭

೧೬.ಡಾ.ನಾ.ಗೀತಾಚಾರ್ಯ : ಹಸ್ತಪ್ರತಿಶಾಸ್ತ್ರ ವಿವೇಚನೆ, ಸ್ನೇಹನಿಧಿಬಳಗ-ಬೆಂಗಳೂರು ಪುಟ-೩೩-೨೦೦೧

೧೭. ಹೆಚ್.ದೇವಿರಪ್ಪ : ಕನ್ನಡ ಹಸ್ತಪ್ರತಿಗಳ ಇತಿಹಾಸ, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು. ಪುಟ-೪೭-೧೯೯೯

೧೮. ಬಿ.ಆರ್.ಹೀರೆಮಠ : ಸಾಧನೆ(ಬೆಂ.ವಿ.ವಿ.)(೧೨-೦೨-೧೯೮೩) ಪುಟ-೪೦

೧೯.ಎ.ಆರ್.ಗುರು : ಅಲಿಗೆ ಮೇಲಿನ ಮನೆಯ ಹಸ್ತಪ್ರತಿಗಳು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ. ಪುಟ-೮೧ - ೨೦೦೬

೨೦.೨೧.ಬಿ.ಆರ್.ಹೀರೆಮಠ :ಸಾಧನೆ(ಬೆಂ.ವಿ.ವಿ.) (೧೨-೦೨-೧೯೮೩) ಪುಟ-೪೩

೨೨,೨೩. ಹೆಚ್.ದೇವಿರಪ್ಪ : ಕನ್ನಡ ಹಸ್ತಪ್ರತಿಗಳ ಇತಿಹಾಸ, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು. ಪುಟ-೪೭-೧೯೯೯

೨೪. ಕೆಳದಿ ಗುಂಡಾಜೋಯಿಸ್ ಮತ್ತು ಡಾ॥ನಾ.ಗೀತಾಚಾರ್ಯ: ಬಿ.ಎಂ.ಶ್ರೀ.ಪ್ರತಿಷ್ಠಾನದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಪುಟ-೫೧-೧೯೮೭

೨೫. ಬಿ.ಆರ್.ಹೀರೆಮಠ : ಸಾಧನೆ(ಬೆಂ.ವಿ.ವಿ.)
(೧೨-೦೨-೧೯೮೩) ಪುಟ-೫೮
೨೬. ಡಾ.ವೀರೇಶಬಡಿಗೇರ : ಹಲಗೆ ಬಳಪ, ಮಯಾ ಪ್ರಕಾಶನ, ಕಮಲಾಪುರ
ಪುಟ-೨೩- ೨೦೦೫

೨೭.ಬಿ.ಆರ್.ಹೀರೆಮಠ : ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ಸಂ-೬೯ ಸಂ.೦೭
೨೮ ಡಾ.ವೀರೇಶಬಡಿಗೇರ : ಹಲಗೆ ಬಳಪ, ಮಯಾ ಪ್ರಕಾಶನ, ಕಮಲಾಪುರ
ಪುಟ-೧೧- ೨೦೦೫
೨೯. ಕೆಳದಿ ಗುಂಡಾಜೋಯಿಸ್ ಮತ್ತು ಡಾ॥ನಾ.ಗೀತಾಚಾರ್ಯ: ಬಿ.ಎಂ.ಶ್ರೀ.ಪ್ರತಿಷ್ಠಾನದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಪುಟ-೪೮-೧೯೮೭
೩೦. ಹೆಚ್.ದೇವಿರಪ್ಪ : ಕನ್ನಡ ಹಸ್ತಪ್ರತಿಗಳ ಇತಿಹಾಸ, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು. ಪುಟ-೫೫-೧೯೯೯
೩೧. ಸದಾನಂದಪಾಟೀಲ – ಕರ್ನಾಟಕ ಭಾರತಿ ಸಂಪುಟ-೧೮ ಸಂಚಿಕೆ-೨,೩
೩೨. ಎಸ್.ಎಂ.ಕತ್ರೆ :ಭಾರತೀಯ ಗ್ರಂಥ ಸಂಪಾದನಾ ಪರಿಚಯ
ಅನುವಾದ. ಲಕ್ಷ್ಮಿನಾರಾಯಣ ಭಟ್ಟ ಪುಟ-೩೧ – ೧೯೬೮
೩೩.ಡಿ.ಎಲ್.ನರಸಿಂಹಾಚಾರ್ : ಕನ್ನಡ ಗ್ರಂಥ ಸಂಪಾದನೆ, ಶಾರದಮಂದಿರ ಮೈಸೂರು ಪುಟ-೧೧೦- ೧೯೬೪

## ಅಧ್ಯಾಯ-೪

## ಬಿ.ಎಂ.ಶ್ರೀ.ಪ್ರತಿಷ್ಠಾನದ ಹಸ್ತಪ್ರತಿ ಲಿಪಿಕಾರರ ವರ್ಗೀಕರಣ

ನಮ್ಮ ಕನ್ನಡ ನಾಡಿನಲ್ಲಿ ಹಸ್ತಪ್ರತಿ ಸಂಗ್ರಹ ಕಾರ್ಯಗಳಲ್ಲಿ ಮುಂಚೂಣಿಯಲ್ಲಿರುವ ಸಂಸ್ಥೆಗಳಲ್ಲಿ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನವೂ ಒಂದು. ಇಲ್ಲಿ ಸಂಗ್ರಹವಾಗಿರುವ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿಯನ್ನು ಪ್ರಕಟಿಸಿದೆ. ಅಲ್ಲದೆ ಕೆಲವೊಂದು ಪ್ರಾಚೀನ ಕೃತಿಗಳನ್ನು ಶಾಸ್ತ್ರೀಯವಾಗಿ ಸಂಪಾದಿಸಿ ಪ್ರಕಟಣೆ ಮಾಡಿದೆ. ಅಲ್ಲದೆ ಮೌಲಿಕ ಶಾಸ್ತ್ರ ಪ್ರತಿಗಳಾದ ಹಸ್ತಪ್ರತಿಗಳು ಓಲೆಗರಿಗಳನ್ನು ಕುರಿತು ಅಧ್ಯಯನ ಮಾಡುವವರಿಗೆ ಅತ್ಯಮೂಲ್ಯವಾದ ಮಾಹಿತಿಯನ್ನೋದಗಿಸುತ್ತವೆ.

ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ಸೂಚಿಯಾಗಿರುವ ಹಸ್ತಪ್ರತಿಗಳನ್ನು ಕೇಂದ್ರವಾಗಿಟ್ಟು ಕೊಂಡು ಇವುಗಳ ಪ್ರತಿಕಾರರ ಬರಹಗಳಲ್ಲಿ ಕಂಡು ಬರುವ ಇಷ್ಟ ದೈವಸ್ತುತಿ, ಪ್ರತಿಮಾಡಿದ ಕಾಲ, ತಾನು ಅನುಸರಿಸಿ ನಂಬಿದ ಧರ್ಮದ ನಿಷ್ಠೆಯನ್ನು ಅಧಾರವಾಗಿಟ್ಟು ಕೊಂಡು ಲಿಪಿಕಾರವನ್ನು ಈ ಕೆಳಗಿನಂತೆ ವರ್ಗೀಕರಿಸಲಾಗಿದೆ.

### ಅ) ಜೈನ ಲಿಪಿಕಾರರು

ನಮ್ಮ ಲಿಪಿಕಾರರ ಚರಿತ್ರೆಯಲ್ಲಿ ಅತಿ ಪ್ರಾಚೀನ ಕಾಲದಿಂದ ಉಕ್ತವಾಗಿರುವ ಲಿಪಿಕಾರರೆಂದರೆ ಜೈನ ಲಿಪಿಕಾರರು. ಇವರು ಎಲ್ಲಾ ಧರ್ಮಕೃತಿಗಳನ್ನು ಪ್ರತಿಮಾಡುವುದರ ಮೂಲಕ ಸರ್ವಧರ್ಮ ಸಮನ್ವಯವನ್ನು ಸಾರಿದ್ದಾರೆ ಅಲ್ಲದೆ ಪಂಪ, ರನ್ನ, ಜನ್ನರಂತಹ ಮಹಾಕವಿಗಳ ಕೃತಿಗಳನ್ನು ಪ್ರತಿ ಮಾಡಿದ್ದರಿಂದಲೇ ಇಂದು ನಮಗೆ ಅವರ ಕೃತಿಗಳು ಉಪಲಬ್ಧವಾಗಿರುವುದು. ಸಾಮಾನ್ಯವಾಗಿ ಜೈನಪ್ರತಿಕಾರ ಪ್ರತಿಗಳಲ್ಲಿ. 'ಶ್ರೀ ಮಂತ್ಪಂಚಪರಮೇಷ್ಟಿ ಭ್ಯೋ ನಮಃ' 'ಶ್ರೀಮತ್ಪಂಚಗುರುಭ್ಯೋನಮಃ' 'ಶ್ರೀವೀತರಾಗಾಯನಮಃ' ಮತ್ತು ೨೪ ಜನ ತೀರ್ಥಂಕರಲ್ಲಿ ಯಾರನ್ನಾದರೂ ಸ್ತುತಿಸಿರುವುದು ಕಂಡು ಬರುತ್ತದೆ ಆದರೆ ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿರುವ ಈಗಾಗಲೇ ಸೂಚಿಗೊಂಡಿರುವ ಹಸ್ತಪ್ರತಿಗಳಲ್ಲಿ ಒಬ್ಬ ಜೈನ ಲಿಪಿಕಾರ ಮಾತ್ರ ನಮಗೆ ಕಂಡು ಬರುತ್ತಾನೆ. ಅವನ ವಿವರ ಹೀಗಿದೆ

ನಂ।೬।೭೪ ರ ಕವಿ ಮಲ್ಲಿಶೇಣಾಚಾರ್ಯ ಇವರು ನೋಂಪಿಯ ಕಥೆಗಳ ಓಲೆ ಪುಟದ (೧) ರ ಹಿಂಭಾಗದಲ್ಲಿ "XXXX [ರ್ದ್ಧನ ಪುರದ ದ್ವಿಜಯ ಪಾರ್ಶ್ವನಾಥ] ಸ್ವಾಮಿಯ ದಿವ್ಯಶ್ರೀ ಪಾದವೇ ಶರಣು।ಛತ್ರತ್ರಯಪುರದ ಚಂದ್ರನಾಥ ಸ್ವಾಮಿಯ ಪಾ[ದವೇಶರಣು।ಧರ್ಮಪುರಿಯ] ಆದೀಶ್ವರ ಸ್ವಾಮಿಯ ಶ್ರೀಪಾದವೇ ಶರಣು।ಕನಕಗಿರಿಯ ಪದ್ಮಾವ ತಮ್ಮನವರ ಪಾದವೇ ಗತಿ:।XXಗಪುರದ ಜ್ವಾಲಾಮೂಲ ನಿಯಮ್ಮನವರ ಪಾದವೇ

ಗತಿಃ ನೊಂಪಿಕಥೆಯಂ ಬರೆವುದಕ್ಕೆ ಜಯಮಂಗಳ ಮಹಾ॥ಶ್ರೀ ಶ್ರೀ ಶ್ರೀ ॥೧॥ ಎಂದಿದ್ದು ಅಂತ್ಯದಲ್ಲಿ.

ಕಂದ॥ ನಾಗಕುಮಾರ ಕಥೆಯಂ
ಬೇಗಂ ಕಡುಜಡರು ಮತಿಯೆವನಿತಾಜನಮುಂ।
ರಾಗವಿಮಶೇಷ ವಿದ್ಯಾ
ಭಾಗಿ ಶ್ರೀ ಮಲ್ಲಿಶೇಣ (ಮುನಿ) ಪಂ ಪೇಳ್ದಂ॥

ಇತ್ಯುಭಯ ಭಾಷಾ ಕವಿಶೇಖರ ಮಲ್ಲಿಶೇಣಾಚಾರ್ಯ ವಿರಚಿತಂ ನಾಗಕುಮಾರ ಚರತಂ ಸಮಾಪ್ತಜ್ಞಯಮಂಗಳ ಮಹಾಶ್ರೀ ಶ್ರೀ ಶ್ರೀ ಈ ಗ್ರಂಥದ ಕೆಲವೊಂದು ಭಾಗದಲ್ಲಿ ಈ ಲಿಪಿಕಾರನ ಬರವಣಿಗೆಯಿದ್ದರೆ ಇನ್ನೊಂದು ಭಾಗದಲ್ಲಿ ಬೇರೊಂದು ಲಿಪಿ ಶೈಲಿಯಿದೆ.

ಒಟ್ಟಾರೆಯಾಗಿ ಮಲ್ಲಿಶೇಣಾಚಾರ್ಯ ಕವಿ ಮತ್ತು ಲಿಪಿಕಾರನೂ ಆಗಿದ್ದನು ಎಂಬುದು ತಿಳಿದುಬರುತ್ತದೆ.

### ಆ) ವೀರಶೈವ ಲಿಪಿಕಾರರು.

ಬಿ.ಎಂ.ಶ್ರೀ.ಪ್ರತಿಷ್ಠಾನದ ಸಂಗ್ರಹದಲ್ಲಿರುವ ಹಸ್ತಪ್ರತಿಗಳನ್ನು ಪ್ರತಿಮಾಡಿದವರಲ್ಲಿ ವೈದಿಕ ಲಿಪಿಕಾರರ ನಂತರದ ಸ್ಥಾನವನ್ನು ಈ ವೀರಶೈವ ಲಿಪಿಕಾರರು ತುಂಬುತ್ತಾರೆ ಈ ಲಿಪಿಕಾರರ ಪ್ರತಿಯಲ್ಲಿ ಕಂಡು ಬರುವ ವಚನಕ್ರಾಂತಿ, ಶೂನ್ಯ ಸಂಪಾದನೆ, ಮಠ, ಗುರುಪೀಠ, ವಚನಕಾರರ ಉಲ್ಲೇಖಗಳು ಮತ್ತು ವೀರಶೈವ ಕೃತಿಗಳನ್ನು ಪ್ರತಿಮಾಡಿರುವವರನ್ನು ಈ ವರ್ಗಕ್ಕೆ ಸೇರಿಸಲಾಗಿದೆ. ಈ ಕೆಳಕಂಡ ಲಿಪಿಕಾರರ ಸ್ವಬರಹಗಳನ್ನು ಗಮನಿಸಬಹುದು.

೧. ನಂಓ।೧೩ ಸಂಖ್ಯೆಯ ಓಲೆಗರಿಗಳು ಅಲ್ಲಮಪ್ರಭುವಿನ ಕಥೆಯನ್ನು ಒಳಗೊಂಡು ಸಾಂಗತ್ಯದಲ್ಲಿರಚಿಸಲ್ಪಟ್ಟಿವೆ ಅಲ್ಲದೆ ಓಲೆ ಪುಟ ೯೩ ರಲ್ಲಿ ಅಂತೂ ಸಂಧಿ ೬ಕ್ಕಾಂ ಪದನೂ ೭೨೭ ಕ್ಕಾಂ ಮಂಗಳ ಮಹಾ ಶ್ರೀ ಶ್ರೀ ಹಾಗೂ ಶ್ರೀ ಉಮಾಮಹೇಶ್ವರಾಯನಮಃ, ಗುರುಬಸವಲಿಂಗಾಯನಮಃ, ಶ್ರೀ ಚಂದ್ರಶೇಖರಾಯನಮಃ ಇತ್ಯಾದಿ ಉಲ್ಲೇಖಗಳು ಮತ್ತು ಅಂತ್ಯದಲ್ಲಿ.
"ಮೇಧೀನಿಯೊಳು ಪ್ರಭುವಿನ ಸಂ
XXXXX ನಾದಾರದಿಂದ ಕೇಳಿದರೆ
ಸಾದಕವಹುದು ಸಕಲ ಸುಖ ಕಡೆಯಲಿ
ಆದಿ ಶಿವನು XX ಣಿಪನೂ"
ಎಂಬುದು ಉಲ್ಲೇಖಗೊಂಡಿದ್ದು ಪ್ರತಿಕಾರನ ಹೆಸರು ಕಂಡು ಬರುವುದಿಲ್ಲ.

೨. ನಂಬ೪೪೭೧ರ 'ಕಾರ್ತಿಕ ಸೋಮವಾರ ವ್ರತ ಕಲ್ಪದ ಕೃತಿಕಾರನು ಸೋಮವಾರದ ಮಹಿಮೆ ಮತ್ತು ಪೂಜಾಫಲವನ್ನು' ಕುರಿತು ಹೇಳುತ್ತಾನೆ.
'ಆದಿಯಲ್ಲಿ ಶ್ರೀ ರಾಮಾಯನಮಃ।ಶುಭಮಸ್ತು।ಓಂ ಸೋಮವಾರವ್ರತಂ ಶಂಬೋಕರಿಷ್ಯೆ ತವಸನ್ನಿಧೌ।ಅವಿಘ್ನಂ ಕುರುಮೆದೇವ ಸರ್ವಾಭೀಷ್ಟಫ XXXX...| ಮಹೇಶ್ವರಾ ದೇವತಾಭ್ಯೋನಮಃ। ಓಂ ಭವಾಯನಮಃ।ಓಂ ಶಿವಾಯನಮಃ। ಬಂದು ಪಶುಪತಯೆನಮಃ ಓಂ ನೀಲಗ್ರೀವಾಯನಮಃ।ಓಂ XXXXಎಂದಿದ್ದು ಅಂತ್ಯದಲ್ಲಿ ಓಂ ತತ್ಸದಿತಿ ಶ್ರೀಸ್ಕಾಂದ ಪುರಾಣೆ ಕಾರ್ತಿಕ ಸೋಮವಾರ ವ್ರತಕಲ್ಪ ಸಂಪೂರ್ಣಂ ॥೯೦॥ ಶ್ರೀ ರಾಮಾರ್ಪಣಮಸ್ತು ಶ್ರೀ ಸಾಂಬಸದಾಶಿವಾಯನಮಃ ಎಂದಿರುವುದರಿಂದ ಈ ಪ್ರತಿಯ ಕೃತಿಕಾರ ವೀರಶೈವನಿರಬಹುದೆಂದು ಹೇಳಬಹುದು.

೩. ನಂಬ೭೧ ಸಂಖ್ಯೆಯ 'ಗರಳಪುರಿಮಹಾತ್ಮೆ' ಕೃತಿಯು ಪರಶುರಾಮನ ಕಥೆಯನ್ನು ಒಳಗೊಂಡಿದೆ. ಇದರ ಆದಿಯಲ್ಲಿ XXಶ್ರೀಮಸ್ಕಾಂದೆ ನಂಜುಂಡೇಶ್ವರ ಪ್ರಸಂನ ಪುರಾಣೆ ಗರಳಪುರ ನಾಥ ಮಾಹಾತ್ಮ್ಯ ಶ್ರೀಕಂಠೇಶ್ವರ ಭಕ್ತ ಶ್ರೀ ಪರಶುರಾಮ ಮಹಿಮವ XXXX ಮದಶಮಾಧ್ಯಾಯಃ ॥೧೧॥ ಶ್ರೀ ಋಷಯಃ।ಸಂಮ್ಯಗುಕ್ತಂ ಮುನಿಶ್ರೇಷ್ಠ ರಾಮಸ್ಯ ತಪಸಸ್ಥಳಂ।ಗೌತಮೆ ನಾಪಿತತ್ಕ್ಷೆ XXX ಮಾಶ್ರಿ ತಮಿತಿ ಪ್ರಭೋ॥ಸೂತಃ॥ ತ್ವಯೋಕ್ತಂ ಮಹಾದಸ್ಮಾಕಂ ವಕ್ತಮರ್ಹಸಿ ತತ್ವತಃ॥ ಶ್ರೀ ಸೂತ: XXX ತಭ್ರುತ್ವಾ ಮುನಿವರ್ಯೊಪಿ ಪ್ರೋವಾಚ ಪರಯಾಮುದಾ ।ಪುರಾಶತಕ್ರತು ರ್ಭೂಮೌ ಗೌತಮಾಶ್ರಮಮಾಯಮೌ॥ ಎಂದಿದ್ದು ಅಂತ್ಯದಲ್ಲಿ ಶ್ರೀ ಪರಶುರಾಮಾಯನಮಃ ಯಾದೃಶೀ ಭಾವನಾಯತ್ರ ಸಿದ್ಧಿರ್ಭವತಿ ತಾದೃಶೀ। ಅಬದ್ದಂ ವಾ ಸುಬದ್ದಂ ವಾ ಮಮ ದೋಷೋನ ವಿದ್ಯತೆ॥ ಕರಕೃತಮಪರಾಧಂ ಕ್ಷಂತುಮರ್ಹಂತಿ ಸಂತಃ ಶ್ರೀ ಗರಳ ಪುರೀಶ, ಶ್ರೀಗರಳ ಪುರೀಶಾಯನಮಃ ಶ್ರೀ ಕಂಠಾಖ್ಯ ಸದಾಶಿವಸ್ಥಳ ಮಹಾಮೈತ್ನಾ ಕರೋತಿ ಶ್ರೀಯಂ।ಸ್ಕಾಂದ ಪರಶುರಾಮ ಪುರಾಣೆ ಗರಳಪುರಿನಾಥ ಮಾಹಾತ್ಮ್ಯೆ ............ ಎಂಬ ಉಲ್ಲೇಖವಿದೆ.

೪. ನಂಬ೪೮ರ ಚೋರಕಥೆಯ ಆದಿಯಲ್ಲಿ

'ಶ್ರೀ ಗುರುಶಾರದಾಂಬಾಯನಮಃ ॥ ಶ್ರೀ ಗಣಾಧಿಪತಯೇನಮಃ॥ ಚೊರಕಥೆಯಂ ಯಕ್ಷಗಾನದಲ್ಲಿ ಬರೆಯುವುದಕ್ಕೆ ಶುಭಮಸ್ತು' ಎಂದು ಹೇಳಿ ಶಿವನ ವಿವಿಧ ಹೆಸರುಗಳನ್ನು ವರ್ಣನೆ ಮಾಡಲಾಗಿದೆ ಇದರ ಅಂತ್ಯದಲ್ಲಿ.
'ಹರುಷದಿಂಕೇಳಿ। ಬರದೊದಿದವರ್ಗೆ ಅನವರತ ಆಯುರಾರೋಗ್ಯ ಐಶ್ವರ್ಯಮಂ। ಹರನೊಲಿದು ಕರುಣಿಪನು। ಶರಧಿಗರಿತಾರೆ।ಹಿಮಕರ ತರಣಿಯುಳ್ಳನಕ। ಸ್ಥಿರವಾದ ಕೃತಿಯ ಯಿ ಚರಿತ್ರೆ ಅಚಂದ್ರಾರ್ಕಮಾಗಿವಪ್ಪಿಹುದೂ'॥

ಅಂತು ಅಧ್ಯಾಯ ೧೦ಕಾಂ। ಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ॥ ಚೊರ ಕಥಾ ಪ್ರಸಂಗ ಸಂಪೂರ್ಣ॥ ಶ್ರೀ ಶ್ರೀ ಶ್ರೀ ಮಾದಿಹಳಿ XXX ಮಟದ ಬಸವಲಿಂಗ ದೇವರ ಕುಮಾರ ದೊಡ್ಡೈಯನವರು ಸ್ವಹಸ್ತದಿಂದ ಬರದಂತ ಚೊರಕಥೆ॥ ಕೈತಪ್ಪುಗಳು ಯಿದ್ದರೆ ತಿದ್ದಿಕೊಳ್ಳುವುದು॥ ಶ್ರೀ ಶ್ರೀ॥ ಎಂಬುದು ಲಿಪಿಕಾರನ ಆದರ್ಶ ವಿನಯವನ್ನು ತೋರುತ್ತದೆ.

೫. ೭೧೦ರ 'ನವರತ್ನ ಚಿಂತಾಮಣಿ' ಕೃತಿಯಲ್ಲಿ ಪ್ರಶ್ನೆ ಫಲ ಜ್ಯೋತಿಷ್ಯ ವಿಚಾರಗಳನ್ನು ಹೇಳಿದ ಇದರ ಆದಿ
"ಶ್ರೀ ಗುರುಬಸವಲಿಂಗಾಯನಮಃ॥ ಶ್ರೀ ಗಣಾಧಿಪತಯನಮಃ ಪ್ರಮದೂತ ಸಂವತ್ಸರದ ಆಶ್ವೀಜ ಶುದ್ದ೧ ದಲ್ಲಿ ನವರತ್ನ ಚಿಂತಾಮಣಿ ಪುಸ್ತಕ ಬರೆವುದಕ್ಕೆ ಶುಭಮಸ್ತು ।ನಿರ್ವಿಘ್ನಮಸ್ತು ಯಿ ನವರತ್ನ ಚಿಂತಾಮಣಿಯ ಕೇಳುವ ಕ್ರಮ ಆದಿತ್ಯವಾರ ದಿವಸವೊಂಬತ್ತು ಕವಡೆಯನ್ನು XX ಕ್ಷೀರದಲ್ಲಿ ತೊಳೆದು XXX ನೀರಿನಲ್ಲಿ ತೊಳೆದು ಯಡೆವಣೆಯ ಮೇಲೆ ಮಡಿವಸ್ತ್ರ ಹಾಸಿ ಚಿಂತಾಮಣಿ ಪುಸ್ತಕ ಕವಡೆಯನ್ನು ಸಹ ಪೂಜೆಯಂನ್ನು ಮಾಡಿ ಎಂದಿದ್ದು ಅಂತ್ಯದಲ್ಲಿ ಯೀ ಪ್ರಮದೂತ ಸಂವತ್ಸರದ ಅಶ್ವಿಜ ಶುದ್ಧ ೧೦ ಮಂಗಳವಾರತ್ರದಲ್ಲು ನವರತ್ನ ಚಿಂತ್ತಮಣಿ ಪುಸ್ತಕವನ್ನು ಶಿವಮೊಗ್ಗ ತಾಲೂಕು ಬಿದ್ರಿ ಮಾಗಣಿ ಸೌಲೆಭ್ಯಪುರದಲ್ಲಿರುವ ಸಾವಳಿ ಮಠದ ಬಳಿಯ ಅೃನಹಳ್ಳಿ ಸಾವಳಿಗನು ಕರ್ತುಗಳಾದ ಶಿವಲಿಂಗ ಪೈಯ್ನ ಕುಮಾರನಾದ ಗುರುಶಿಧೈಯ್ಯನವರ ನೌಲವನದೇವಸ್ಥಾನದಲ್ಲಿ ಸಮರ್ಪಣೆವಾಯಿತು॥

೬. ನಂ೬.೨ ಸಂಖ್ಯೆಯ ಪ್ರಭುಚರಿತ್ರ ರಾಗಮಾಲದಲ್ಲಿ ಕೃತಿಕಾರ ಅಲ್ಲಮ ಪ್ರಭುವಿನ ಚರಿತ್ರೆಯನ್ನು ತಿಳಿಸಿದ್ದಾನೆ ಈ ಕೃತಿಯ ಆದಿಯಲ್ಲಿ ಶ್ರೀ ಗುರುಬಸವಲಿಂಗಾಯನಮಃ ॥ ಪ್ರಭುಚರಿತ್ರ ರಾಗಮಾಲಾ ಬರೆಯುವುದಕ್ಕೆ ಶುಭಮಸ್ತು

ಕಂದ॥ ಯಿಂದೀ ಪರಿ ಬಸವರಾಜನು
ಚಂದದೊಳಲ್ಲಮನ ಧ್ಯಾನಿಸುತ್ತಿರುತ್ತಿರ
ಲದಂ ಪ್ರಭು ದೇವರು ತಿಳಿಯತ್ತಾ
ನಂದತೆಯೊಳು ಹೆಚ್ಚಿ ಹಿಗ್ಗುತ ಸರಸದೊಳ್ಳೈ ತಹನೆ॥

ಮುಂದೆ ಸಂಧಿಯೆಂಬಲ್ಲಿಗೆ ॥೨॥ ಸಂಧಿಯು ೫ನೇಯದು ಯಿದ ಕೊಂದಿದ ಪದ ೧೫೫ ದಾ ಪಿಂದಣ ಪದ ಸಹ ಸಂಧಿಯು ಗಣಿಸಲ್‌ಪದ ಬಂದುದು ೬೦೧೮ ಲ್ಲಿಗೆ ॥೩॥ ಅಂತು ಸಂಧಿ ೫ಕ್ಕಂ ಪದನು ೬೦೦೮ ಕ್ಕಂ ಮಂಗಳ ಮಹಾ ಶ್ರೀ ಶ್ರೀ ಶ್ರೀ ॥ಗುರು ಪ್ರಭುಲಿಂಗಾಯನಮಃ ಹೇವಳಂಬಿ ನಾಮ ಸಂವತ್ಸರದ ಶ್ರಾವಣಶುದ್ಧ ೮ ಮಿ ಭಾನುವಾರ

ಭದ್ರ ವ್ಯಾಕರಣ ಯೋಗ ಧನಿಷ್ಠಾ ನಕ್ಷತ್ರ ಶುಭತಿಥಿಯಿಂ ಶಿವಗಂಗೆ ಅಯ್ಯನವರ ಬರಹ। ಪ್ರಭುಚರಿತ್ರೆ ರಾಘಮಾಲಕ್ಕೆ ಶಾಂತಿ ಶಾಂತಿಃ ಸರ್ವ ಶಾಂತಿ ರಸ್ತು। ಯತ್ರ ಘನ ಸಂಪೂರ್ನ ಮಂಗಳ ಮಹಾ ಶ್ರೀ ಶ್ರೀ ಶ್ರೀ ಸ್ವರ್ನಾಂಭೆಯಮನವರ ದಿವ್ಯ ಶ್ರೀ ಚರಣಾರವಿಂದವೇದ ಶ್ರೀ ಶ್ರೀ ಶ್ರೀ ಶ್ರೀ ಎಂದಿದ್ದು ಪ್ರತಿಆಶ್ವಾಸದ ಪ್ರಾರಂಭದಲ್ಲೂ ಶ್ರೀ ಗುರು ಪ್ರಭುಲಿಂಗಾಯನಮಃ ಎಂದಿದೆ.

೭. ೦೭೭೫ ಸಂಖ್ಯೆಯ ಪ್ರಾಕೃತ ಭಾರತ ಕೃತಿಯು ಕುಮಾರವ್ಯಾಸನಿಂದ ರಚಿಸಲ್ಪಟ್ಟಿದ್ದು ಪೌಲೋಮ ಪರ್ವದ ಕಥೆಯನ್ನೊಳಗೊಂಡಿದೆ ಓಲೆಕಟ್ಟಿನ ಆದಿಯಲ್ಲಿ ಶ್ರೀ ಗಣೇಶ ಶಾರದಾ ಗುರುಭ್ಯೋಂ ನಮಃ ಶ್ರೀ ವೇದೌವ್ಯಾಸಾಯನಮಃ ಶ್ರೀ ಲಕ್ಷ್ಮಿನೃಸಿಂಹಾಯ ನಮಃ ಶ್ರೀ ಮಾತಾಪಿತೃಭ್ಯೊಂನಮಃ ಎಂದಿದೆ ಮತ್ತು
"ಸ್ವಸ್ತಿಶ್ರೀ ಜಯಾಭ್ಯುದಯ ಶಾಲಿವಾಹನ ಶಕವರುಷಂಗಳು ಶುಭ ಕೃತು ನಾಮ ಸಂವತ್ಸರದ ಜೇಷ್ಠಬ೧೦ ಸೋಮವಾರದಲು ಶ್ರೀ ಮಲ್ಲಪ್ಪನವರ ಪುತ್ರ ಶಂಕರಪ್ಪನ ಮಗ ನಂಜುಂಡನು ಬರೆದ ಪ್ರಾಕೃತ ಭಾರತಕ್ಕೆ ಶುಭಮಸ್ತು" ಎಂದು ಲಿಪಿಕಾರ ತನ್ನ ಮಾಹಿತಿಯನ್ನು ಹೇಳಿಕೊಂಡಿದ್ದಾನೆ ಮತ್ತು ಅಂತ್ಯದಲ್ಲಿ
ಅಂತು ಸಂಧಿ ೫೨ಕೆ ಪದನೂ ೩೧೭೯ ಕಂ ಮಂಗಳಮಹಾಶ್ರೀರಾಮಾಯನಮಃ ಯಿತಿ ಶ್ರೀ ಮಹಾಭಾರತೇ ಶತಸಹಸ್ರ ಸಂಹಿತಾಯಂ ಶ್ರೀ ಆದಿಪರ್ವಣೆ ಖಾಂಡಾವನದಹನ ಯಿಂದ್ರಾಪಜಯ ಅಚ್ಯುತಾರ್ಜುನ ಪ್ರತಾಪವನಾನಾಂ। ಶ್ರೀ ಕೃಷ್ಣಾಪಾದಾ। ಆದಿಪರ್ವಸಮಾಪ್ತ।ಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ ರಾಮಾಯನಮಃ

೮. ನಂ೦।೪೦ ಸಂಖ್ಯೆಯ ವ್ರತಕಲ್ಪಗಳು ಕವಿಯೂ ಸ್ವಂತ ಲಿಪಿಕಾರನು ಆಗಿರುವ ತೋಗೆರೆ ಶ್ರೀಧರ ನಂಜುಂಡ ಶಾಸ್ತ್ರಿಗಳಿಂದ ರಚಿಸಲ್ಪಟ್ಟಿದ್ದು ಇದರ ಆದಿಯಲ್ಲಿ ಓಲೆಪುಟ ೧ (ಬದಿಯಲ್ಲಿ ಭೀಮೇಶ್ವರ ವ್ರತಂ।ಸ್ಥಾಣಂವೆ ನಮಃ ಮಧುಪರ್ಕಂ। ಶಿವಾಯನಮಃ। ಪಂಚಾಮೃತ ಸ್ನಾನಂ ಗಂಗಾಧರಾಯನಮಃ ಶುದ್ಧೋದಕ ಸ್ನಾನಂ। ದಿಗ್ವಾಸನೆನಮಃ ವಸ್ತ್ರಂ। ನಾಗಯಜ್ಞೋಪಾವಿತಿನೆನಮಃ ಉಪವಿತಂ ಭೂತಿ ಭೂಷಣಾಯಂನಮಃ॥ ಎಂದಿದೆ ಅಂತ್ಯದ ಗರಿಯಲ್ಲಿ ನೀಲಿ ಮಸಿಯಲ್ಲಿ ":ತೊಗೆರೆ ಶ್ರೀಧರ ನಂಜುಂಡ ಶಾಸ್ತ್ರಿಣ: ಲಿಖಿತಂ ಉತ್ತಮಮಿತಿಮತ್ವಾ" ಎಂದು ಗ್ರಂಥದಲ್ಲಿರುವ ಅಕ್ಷರದ ಶೈಲಿಯಲ್ಲಿಯೇ ಬರೆದಿದೆ.

೯. ನಂ೦।೬೭ ರ ಓಲೆಗರಿಗಳು ಮುತ್ರ ಶ್ಲೋಕ ನಾಮಾವಳಿಗಳನ್ನು ಒಳಗೊಂಡಿವೆ ಮಾದರಿ ಓಲೆಪುಟ೩ (ಹಿಂಬದಿಯಲ್ಲಿ ೧೯ ಎಂದಿದೆ ) ಮನದನರಸ ಮಹೌಘ ಪೂರ್ಣನಾಭಿಹ್ರಾದ ಪರಿವಾಹಿತ ರೋಮರಾಜಯಸ್ಥಾ:
ಸಂತ ಇವ ಸವಿಭ್ರಮ ಪ್ರಯಾ XXX ಥ ಚಾಪನಾದ XX ಶಂತಾಂ ॥೨೪॥
ಓಲೆಪುಟ? (ಬದಿಯಲ್ಲಿ 'ಅ' ಎಂದಿದೆ) ಸ್ಕಂಧಾದಿರೋಢೋಜ್ವಲ ನೀಲಕಂಠನು XX ರು ಹಶ್ಲಿಷ್ಪ ತನೂನ ಹಂದ್ಯೆಃ ಪಾವರ್ತಿತಾನೆ ತಲತಾಭಜಗ್ರಾಂ XX ದ್ರಾ ನನಂ

ತಾನಿವ ದಾರಯಂತಂ ॥೭ ಎಂದಿದೆ. ಬಿಡಿಗರಿಗಳು ಬಹಳಷ್ಟಿವೆ ಎಲ್ಲಗರಿಗಳು ಬಹುಮಟ್ಟಿಗೆ ಶಿಥಿಲವಾಗಿವೆ ಅರ್ಧಮುರಿದಿರುವ ಗರಿಗಳು ಅನೇಕ ಬೇರೆ ಬೇರೆ ಅಳತೆಯ ಗರಿಗಳೂ ಇವೆ.

೧೦. ನಂ॥೬॥೩೫ 'ವೃತಕಲ್ಪ' ದ ಮಂತ್ರ, ನಾಮಾವಳಿಯನ್ನು ಒಳಗೊಂಡಿರುವ ಓಲೆಪುಟ ೧ ರ (ಬದಿಯಲ್ಲಿ ಸೋಮವಾರ ಕಲ್ಪಃ) ಶುಭಮಸ್ತು ॥ ಸೋಮವಾರ ವ್ರತಂ ಶಂಭೂಕರಿಷ್ಯೆ ತವಸಂನಿದೌ ನಿರ್ವಘ್ನಂ ಕುರುಮೆದೇವ ಸರ್ವಾಭಿಷ್ಟ ಫಲಪ್ರದ। ಉಮಾಮಹೇಶ್ವರಾಯ।ಶಿವಾಯ।ರುದ್ರಾ XXXX ಪತಯೇ ನೀಲಗ್ರೀ X .......ಶಿ ಮೌಳಯೆ। ಕಾಮಾರಯ। ದೇವಾಯ। ಸರ್ವಜ್ಞಾಯ। ವಿರೂಪಾಕ್ಷಯ। ಹೃಶಿಕೇಶಾಯ।ಭೀಮಾಯ। ಭಯಹಾರಿಣಿ। ಶ್ರೀ ಕಾಂತಾಯ ಚಂದ್ರ XXX ರಾಯ। ಪಾರ್ವತೀಪತಯೇ ಇತಿ XX ........ಲಿಂದದ್ಯಾತ್।
ಬ್ರಹ್ಮಾದಿ ದೇವ ದೇವೇಶಂ ತ್ರಣಿತ್ರಂ ಚಂದ್ರಶೇಖರಂ। ವ್ಯಾಘ್ರ ಚರ್ಮಧರಂ ದೇವಂ ಸೋಮ ಮೂರ್ತಿ ಧರಂವಿಭುಂ॥

ಅಂತ್ಯದಲ್ಲಿ ಓಲೆಪುಟ ೧೦ಲ ಹಿಂಭಾಗ

೧. ಇತಸ್ತೆ ರೊಹಸ ಸ್ಥಾಪಾರ್ದಾಲೋಕೈಕಾ ಕಿನಂ ಮುನಿಃ । ಕ್ರೀಡಂ ತಂ ಬಾಲಮ ಲೋಶ್ಯ ಭಾರ್ಯಾದ್ವಿತಯ ಸಂಯುತಃ ಮತ್ರ ಹೀನಸ್ತವ XX ಎಂದು ಬರೆಯಲಾಗಿದೆ.

**ಇ) ವೈಷ್ಣವ / ವೈದಿಕ ಲಿಪಿಕಾರರು.**

ಲಿಪಿಕಾರರ ಪ್ರತಿಗಳ ಆದಿ ಅಂತ್ಯದಲ್ಲಿ ಕಂಡು ಬರುವ 'ಶುಭಮಸ್ತು' 'ನಿರ್ವಿಘ್ನಮಸ್ತು' ಶ್ರೀ ಗಣಾಧಿಪತಯೇನಮಃ ಮತ್ತು ಶಾರದೆ, ವಿಷ್ಣು, ಮತ್ತು ಶಂಕರ, ರಾಮಕೃಷ್ಣ, ರಾಮಾನುಜ, ಮಧ್ವಚಾರ್ಯರ ಮೊದಲಾದ ಉಲ್ಲೇಖಗಳು ಪ್ರತಿಯಲ್ಲಿ ಕಂಡು ಬರುವ ಲಿಪಿಕಾರರನ್ನು ಈ ವರ್ಗಕ್ಕೆ ಸೇರಿಸಲಾಗಿದೆ. ಪ್ರಕಟಿತ ಹಸ್ತಪ್ರತಿ ಸೂಚಿಯಲ್ಲಿ ಈ ವರ್ಗದ ಲಿಪಿಕಾರರ ಹಸ್ತಪ್ರತಿಗಳೇ ಅಧಿಕವಾಗಿವೆ.

೧. ನಂ೬।೨೦ ಇದು ಉತ್ತರ ರಾಮಾಯಣ ಕೃತಿಯಾಗಿದ್ದು ಸಂಸ್ಕೃತ ಭಾಷೆಯಲ್ಲಿದೆ ಈ ಕೃತಿಯ ಆದಿಯಲ್ಲಿ

॥ಶುಭಮಸ್ತು॥ ಶ್ರೀ ರಾಮಾಯನಮಃ

ಶ್ರೀ ಲಕ್ಷ್ಮಿನರಸಿಂಹಾಯ ನಮಃ ಉತ್ತರ ರಾಮಾಯಣ ಬರವುದಕ್ಕೆ ಶ್ರೀ ಗುರುಭ್ಯೋನಮಃ ಎಂದಿದ್ದು ಅಂತ್ಯದಲ್ಲಿ

॥ಸಯಾತಿ ಪರಮಂ XXX.....ಶ್ರೀಮತಿಃ

ಇತ್ಯುತ್ತರೆ ಶ್ರೀ ರಾಮಾಯಣೆವುತ್ತರಕಾಂಡೆ ದಶಶತಮರ್ತ್ಸರ್ಗಃ॥ ವಾಲ್ಮಿಕಯ ಮುನೀಂದ್ರಾಯ ಕವಿತಾಮೃತ ಸಿದ್ದಯೆ॥ ವುತ್ತರ ರಾಮಾಯಣ ಸಮಾಪ್ತಂ ಮಂಗಳ ಮಹಾ ಶ್ರೀ ಶ್ರೀ ............ಎಂದಿರುವುದ್ದರಿಂದ ಇದರ ಕವಿ ಮತ್ತು ಪ್ರತಿಕಾರ ವಾಲ್ಮೀಕಿಯೇ ಇರಬೇಕು ಎಂದು ಹೇಳಬಹುದು.

೨) ನಂ೬೯/೧ ಕುಮಾರ ವ್ಯಾಸ ಕವಿಯ ಕರ್ನಾಟಕ ಭಾರತಕಥಾ ಮಂಜರಿಯ ಆದಿಯಲ್ಲಿ "ಶ್ರೀ ಗಣಾಧಿಪತಯೇ ನಮಃ ॥ ಶ್ರೀ ಶಾರದಾಂಬಾಯ ನಮಃ ॥ಶುಭಮಸ್ತು॥

ಶ್ರೀ ಲಕ್ಷ್ಮಿ ವೆಂಕಟಾಚಲಸ್ವಾಮಿ ದಿವ್ಯ ಚರಣಾರವಿಂದವೇಗತಿಃ॥ ಶ್ರೀ ಗಂಗಾಧರಾಯನಮಃ ಶ್ರೀ ಸ್ವ XXX ಪ್ರಮಾತಿ ನಾಮ ಸಂವತ್ಸರ ಮಾಘಬ ೨ ಯಲ್ಲು ಶಿವಗಂಗೆ ರಾಮೈಯ್ಯನವರ ಪುತ್ರ ಹರಿದಾಸನು ನರಸಿಂಗಪ್ಪನವರಿಗೆ ಬರೆದು ಕೊಟ್ಟ ಕರ್ನಾಟಕ ಭಾರತ ಕಥಾ ವಸ್ತುಕಕ್ಕೆ ಶುಭಮಸ್ತು॥ ಸೂಚನೆ॥ XXX ಇಲ್ಲಿ ಹರಿದಾಸನು ಲಿಪಿಕಾರನಾಗಿದ್ದಾನೆ ಅಂತ್ಯದಲ್ಲಿ.

'ಅಂತೂ ಅಧ್ಯಾಯ ೨೬ಕ್ಕಂ ಪದನು ೧೩೨೮ ಮಂಗಳ ಮಹಾಶ್ರೀ ಗಂಗಾಧರಾಯನಮಃ । ಶ್ರೀ ಲಕ್ಷ್ಮಿ ವೆಂಕಟಾಚಲಾಯನಮಃ ಯಿತಿ ಶ್ರೀಮದಚಿಂತ್ಯ ಗದುಗಿನ ವೀರನಾರಾಯಣನ ಚರಣಾರವಿಂದ ಪದದಮಕರಂದ ಮಧುಪಾನ ಪರೀಕ್ಷಿತವ ಚೋಷಟ್ಟದ ನಿಕಾಯ ಶ್ರೀಮತ್ಕುಮಾರವ್ಯಾಸ ಯೋಗೀಂದ್ರ ವಿರಚಿಮಪ್ಪ ಕರ್ನಾಟಕ ಭಾರತ ಕಥಾಮಂಜರಿಯೋಳರಣ್ಯ ಪರ್ವಸಂಪೂರ್ನ ಮಂಗಳ ಮಹಾ ॥ ಶ್ರೀ ಶ್ರೀ .. . . . . . .. ಅಂತೂ ಪರ್ವ ೩ಕ್ಕಂ ಅಧ್ಯಾಯ ೬೫ಪದ ೩೮೫೫ಕಂ ಮಂಗಳ ಮಹಾ ಶ್ರೀ ಶ್ರೀ ಗಂಗಾಧರಾಯನಮಃ ॥ ಎಂದಿದೆ.

೩. ನಂ೬।೧೧।೨ ತಿಮ್ಮಪ್ಪದಾಸರು ಸ್ವತಃ ಕವಿಯೂ ಲಿಪಿಕಾರರು ಆಗಿದ್ದು ಹಲವಾರು ಕೀರ್ತನೆಗಳನ್ನು ರಚಿಸಿದ್ದಾರೆ ಮತ್ತು ಹಲವಾರು ರಾಗ, ತಾಳಗಳನ್ನು ಪರಿಚಯಿಸಿದ್ದಾರೆ.

ಶ್ರೀ ಗುರುಭ್ಯೋ ನಮಃ ॥ಶೋ॥

ಸಾಂಗೋ ಪಾಂಗ ತರಂಗ ನಾಗತನದಾನಲಿಂಗ ದ್ವಿ ಹೃದ್ಯಂಗದಾಯಂ ಗೋಪಾಯತಿವೆದಮೌ X ರನಿ ಶಂಗೂ X೦ನ್ವಿ ದಂವಸ್ತತೀ। ನಂಗೂಪಾನಕ ಮಂಗಳ ಪ್ರದವಿದುಶೃಂಗಾರ ಲಿಂಗಾಂಬುಜಂತು ಗೋಪಾಲಯತೀಂದ್ರಮಿಂಗಿತವಿದು ತುಂಗಂ ಭಜೆ ಸರ್ವದಾ॥

ಅಂತ್ಯದಲ್ಲಿ ಮರೆಯದೆ ಭಾವಗೋಚರವಾಯಿತ್ತೈಯ್ಯ॥
ಕರುಣ ವೆಂಕಟದಾಸವರ್ಯ ಸದ್ಗುರುವೆ॥
ಸಂನಿಕರ್ಷವನಾದ ರಣ ಹೇತುಮಾನವರಿ
ಗೆಂನುತಾನಂದರಸ ರುಚಿದೋರಿಸಿ।
ನಂನತೆ ತೊಳಲಿ ಬಳಲುತ ನಿಂನೊಳೆರಗುವಂ।
ತುಂನತರ ಮಾಡಲಂತರ್ಧಾನವಡೆದೆ॥

ಗೋಪಿನಾರಿಯರಿಗಾನಂದ ರೂಪವ ತೋರಿ । ಎಂದಿದ್ದು ಇದೇ ಕಟ್ಟಿನಲ್ಲಿ ೧೧।೧ನೇ ಸಂಖ್ಯೆಯ 'ಋಣ ಕೀರ್ತನೆಗಳು' ಎಂಬ ಗ್ರಂಥವಿದೆ. ಈ ಗ್ರಂಥದಲ್ಲಿ ಗೋಪಾಲಾರ್ಯರ ಉಲ್ಲೇಖದ ಕೀರ್ತನೆಗಳು ತೆಲುಗು ಭಾಷೆಯಲ್ಲಿರುವುದನ್ನು ಗಮನಿಸಬಹುದು.

೪. ನಂ೬।೭೩ ಸಂಖ್ಯೆಯ 'ಕೃಷ್ಣದೇವರಾಯ ದಿನಚರಿ' ಯನ್ನು ಕ್ರಶ. ೧೫೨೯ ರ ಸುಮಾರಿನಲ್ಲಿ ಮುಕ್ಕು ತಿಮ್ಮಯ್ಯನಿಂದ ರಚಿಸಲ್ಪಟ್ಟಿರಬಹುದೆಂಬ ಉಲ್ಲೇಖವನ್ನು ಕಾಣಬಹುದು.

ಆದಿಯಲ್ಲಿ ಶ್ರೀಮತೆ ರಾಮಾನುಜಾಯನಮಃ॥ ಕೃಷ್ಣ ರಾಯರ ದಿನಚರಿಯ ಕೃತ್ಯಗಳ ವಿಸ್ತಾರ॥ **XXX** ಶ್ರೀ ವಿದ್ಯಾನಗರದಲ್ಲಿ ಕೃಷ್ಣರಾಯರು॥ ವಿದ್ಯಾನಗರದಲ್ಲಿ ವೀರನೃಸಿಂಹರಾಯರು । ಬ್ರಾಹ್ಮಿ ಮುಹೂರ್ತದಲ್ಲಿ ಯಿದ್ದು । ಆದ್ಯರ ನಾಮಾವಳಿಗಳಂನ್ನು ಆಧ್ಯಾತ್ಮ ಸಂಕೀರ್ತನೆಗಳಂನ್ನು ॥ ಪಾಂಡವ ವನಿತೆಯಂನ್ನು॥ ಗಜೇಂದ್ರ ಮೋಕ್ಷವಂನ್ನು। ಭರತ ಸಾವಿತ್ರಿಯಂನ್ನು॥ ಭಾಗವತವಂನು।ಮುಚುಕುಂದಸ್ತೋತ್ರ ಮೊದಲಾದವಂನೂ। ಸಂಜಯನೀತಿ। ವಿದುರನೀತಿ। ಚಾಳುಕ್ಯನೀತಿ। ವೈರಾಗ್ಯಶತಕ। ನೀತಿಶತಕ। ವಧ್ಯನೀತಿ ಮೊದಲಾದಂಥ ರಾಜನೀತಿಗಳನ್ನು ಕೇಳಿದಂತವರಾಗಿ ಎಂದಿದ್ದು ಅಂತ್ಯ ಕೃತಿಯಲ್ಲಿ । ಕೊಂಗರವರ ಪ್ರಸಂಗ ಪ್ರತಾಪಗಳುಯಲ್ಲರಿಗು ಯಣಿಸಲಾಯಿತು। ಅದರಿಂದಾ ತಾಉೂ ಕೃತಿಯ ಹೇಳಿಸಬೇಕುಯಂದು ಅಪ್ಪಣೆಯನ್ನು ಕೊಟ್ಟು । ಮುಕ್ಕು ತಿಂಮೈಯ್ಯ। ಮಾರ್ಯೆಯನವರ ಮಲ್ಲೈಯ್ಯನವರು ಮೊದಲಾದವರನ್ನು ಕೃತಿಯ ಹೇಳಿಕೊಂಡು ಬರಹೇಳಿ ಅಪ್ಪಣೆ ಕೊಟ್ಟರು। ಯಿದೂ ಯಿಂದನವರೆಗೆ ನಡೆದ ಪ್ರವರ್ತಕಗಳು। ಯಿಂನು ಮೇಲೆ ನಡೆದ ವರ್ತಮಾನಗಳಿಗೆ ಬಿಂನಹ ಮಾಡಿ ಕಳುಹಿಸಿನು ಚಿತ್ತಕೆ ಪರಾಮರಿಸಿಕೊಳ್ಳಚಿತ್ತೈಸೂದು ಇಂತಿ ಬಿನ್ನಹ.

೫. ನಂ೬।೫೬ ಸಂಖ್ಯೆಯ 'ಗೀತಾ ಗೋವಿಂದ' ಕೃತಿಯು ಜಯದೇವ ಕವಿಯಿಂದ ರಚಿಸಲ್ಪಟ್ಟಿದ್ದು ಇದನ್ನು ತಿಮ್ಮಪ್ಪದಾಸರು ಪ್ರತಿಮಾಡಿದ್ದಾರೆ ಎಂದು ಹೇಳಬಹುದು.

ಇದರ ಆದಿಯಲ್ಲಿ ಓಲೆ ಪುಟ ೧೫ ರಲ್ಲಿ "ವಾಗ್ದೇವತಾ ಚರಿತ ಚಿತ್ತಪಾದ್ಮಾ ಪದ್ಮಾವತೀ ಚರಣ ಚಾರಣ ಚರ್ಕವರ್ತೀ ಶ್ರೀ ವಾಸುದೇವ ರತಿಕೇಳಿ

ಕಥಾನಮೇತಿಮೇಕಂಕರೋತು ಜಯದೇವ ಕವಿಃ ಪ್ರಬಂಧಂ" ಎಂದಿದ್ದು ಕೊನೆಯ ಗರಿಯಲ್ಲಿ (ಸಾಲುಶಿ) ೧೨ನೇ ಸರ್ಗದಲ್ಲಿ ೭ ಶ್ಲೋಕಗಳ ನಂತರ "ಶ್ರೀ ಜಯದೇವ ಭಣಿತಮಿದಮನು ಪರನಿಗದಿತ ಮದುಃ ಸುಮೋದಂ। ಜನಮನ್ ರಸಿದ ಜನೇಷು ಮನೋರಮ ರತಿರಸಭಾವ ವಿನೋದಂ॥" ಎಂದಿದ್ದು ನಂತರ ೩ ಶ್ಲೋಕಗಳನ್ನು ಬರೆಯಲಾಗಿದೆ .

೬. ನಂ೦೬ ಲಕ್ಷ್ಮೀಶ ಜೈಮಿನಿಭಾರತದಲ್ಲಿ ಬರುವ ರಾಜಸೂಯಯಾಗದ ಕಥೆಯನ್ನು ೩ ಜನ ಲಿಪಿಕಾರರು ಪ್ರತಿಮಾಡಿರ ಬಹುದೆಂದು ತಿಳಿಯಬಹುದಾಗಿದೆ ಇದರ ಆದಿಯಲ್ಲಿ "ಅಂತೂ ಸಂಧಿರ್ಕ್ಕಾಂ ಪದನು ೬೧೨ ಕ್ಕಾಂ ಮಂಗಳ ಮಹಾ ಶ್ರೀ ಶ್ರೀ ಶ್ರೀ ಅಗಸ್ತೆಶ್ವರಾಯನಮಃ॥ ಶ್ರೀ ಅಶ್ವತ್ಥ ನಾರಾಯಣಾಯನಮಃ॥ ಶ್ರೀ ರಾಮಚಂದ್ರಾಯನಮಃ ಎಂದಿದ್ದು ಆಶ್ವಾಸಾಂತ್ಯಗಳಲ್ಲಿ ದೇವಪುರದೊಡೆಯ ಲಕ್ಷ್ಮಿವರಂ ಮಾಡಿದಂತಂನ ಮೈದುನನೋಳಾಳೊಚನೆಯನೂ॥ ಎಂಬ ಉಲ್ಲೇಖಗಳು ಕಂಡು ಬರುತ್ತವೆ ಮತ್ತು ೦.೨೩ ಓಲೆಗರಿ ಕಟ್ಟಿನ ೬೬ನೇ ಗರಿಯಲ್ಲಿ ದೇವಪುರ ಲಕ್ಷ್ಮೀಶನಂಘ್ರೀಗುಪಚರಿಸಿ ಬಿರುದಾವಳಿಯ ಪಾಠಕರ ಗಢಣದಿಂ ಪೊರಮಟ್ಟನಾ ಹಸ್ತಿನಾವತಿಯನೂ ಎಂಬ ಉಲ್ಲೇಖವಿದೆ. ಮತ್ತು ನಂ೦.೩೭ ರ ಅಂತ್ಯದಲ್ಲಿ ಸಂಧಿ೩ಳ ಪದನು ೭೦೦೦ ಕಾಂ ಮಂಗಳ ಮಹಾಶ್ರೀ ಶ್ರೀ । ಬರಗಿಹಳ್ಳಿ ನರಸಿಂಹಾಯ ನಮಃ ಹಂದನಕೆರೆ ಚೀಬಿ ವಿಘ್ನೇಶ್ವರಾಯನಮಃ ಪೈಯಂಗಳ ಸಂವತ್ಸರದ ಆಶ್ವೀಜ ಶುದ್ದ ೧ ತ್ತಿರವಾದ ಜಯಮಿನಿ ಪುಸ್ತಕ ಸಂಪೂರ್ನಂ.

ತಪ್ಪಂ ಬರೆದಾತಂ ಕಡುಜಡ
ಮಪ್ಪಾತನು ಬರೆದನೆಂದು ಬೈಯಲಿ ಬೇಡಂ
ತಪ್ಪಕ್ಕು ಶುದ್ದ ಮಕ್ಕುಂ
ತಪ್ಪುಳ್ಳರೆ ತಿದ್ದಿ ಕೊಂಬುದುತ್ತುಮ ಪುರುಷರೂ ॥

ವಾಚಾದೋಷ ನವಿದ್ಯತೇ ಗುರುವೇ ಗತಿ ಎಂದು ಲಿಖಿಸಿದೆ.

೭. ೦.೫೦।೧ರ ಕೃತಿಯು 'ದ್ವಾದಶಸ್ತೋತ್ರ' ವಾಗಿದ್ದು ಇದರ ಕವಿ ಆನಂದ ತೀರ್ಥ ಭಗವತ್ಪಾದಾಚಾರ್ಯರು ಈ ಕೃತಿಯ ಆದಿಯಲ್ಲಿ ಓಲೆಪುಟ ೧ (ಬದಿಯಲ್ಲಿ ಶ್ರೀ ಗುರುಭ್ಯೋನಮಃ ॥ ಅವಿಘ್ನಮಸ್ತು॥ ಶುಭಮಸ್ತು॥ ದ್ವಾದಶ ಸ್ತೋತ್ರ॥

ಶ್ರೀ ವೇದವ್ಯಾಸಾಯನಮಃ ಹರಿ ಓಂ॥ ವಂದ್ದೇ ವಂದ್ಯ ಸದಾನಂದ್ದನಂ॥ ವಾಸುದೇವಂ ವಿರಂಚಿನಂ ಇಂದ್ದಿರಾ ಫತಿಮಾ॥೧॥ ವಾಧೀವರದೇಶವರಪ್ರದಂ॥೧॥ ಎಂಧಿದ್ದು ಅಂತ್ಯದಲ್ಲಿ.

"ಇತಿ ಶ್ರೀ ಮದ್ದಾನಂದ ತೀರ್ಥ ಭಗವತ್ಪಾದಾಚಾರ್ಯ ವಿರಚಿತ ದ್ವಾದಶ ಸ್ತೋಥ್ರ ದ್ವಾದಶೋದ್ಯಾಯಃ ಸಂಪೂರ್ನಂ॥ ಶ್ರೀ ಕೃಷ್ಣಾರ್ಪಣಮಸ್ತು॥ XXX ಜಾಲಕುಂಟೆ ವೆಂಕಪ್ಪ ಬೆಡುಹಾಳ್ಳಿ ದೊಡ್ಡನರಸಿಂಹ್ಯಗೆ ಆಸಿರ್ವಾದ ಮಾಡಿ ಬರೆಕೊಟ್ಟ ದ್ವಾದಶ ಸ್ತೋತ್ರಕ್ಕೆ ಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ ಚೆಯನೂಂ॥

೮. ೭೯೪ ರ ಭೀಷ್ಮ ಯುದಿಷ್ಠಿರ ಸಂವಾದ ಕೃತಿಯು ಅಮಾ ಸೋಮವಾರವ್ರತ, ಅಶ್ವತ್ಥನಾರಾಯಣ ಪೂಜಾ. ಅಷ್ಟೋತ್ತರ ನಾಮಾವಳಿಗಳನ್ನು ಒಳಗೊಂಡಿದೆ ಇದರ ಆದಿಯಲ್ಲಿ

ಉಮಾಯ್ಯೆ ಶ್ರೀಯ್ಯೆ। ಸಪ್ನ ಮುದ್ರಾಯ । ಶ್ರೀ ಅಶ್ವತ್ಥನಾರಾಯಣಾಯ ನಮಃ ದ್ವಾರಕ ಪಾಲಕ ಪೂಜಾ ಸಮರ್ಪಯಾಮಿ। ಅಥದಿಕ್ಪಾಲ ಪೂಜಾ। ಇಂದ್ರಾಯ। ಅಗ್ನಯೆ। ಯಮಾಯ। ನೈಋತಯೆ। ವಜ್ರಹಂಸಾಯ। ಗಜಾರೂಢಾಯ। ದೇವಪರಿವಾಯ। ಸಪತ್ನಿಕಾಯ। ಅಗ್ನಯ ಮೆಷಾರೂಢಾಯ।ಹವ್ಯವಾಹನಾಯ। ತೇಜಃ ಪರಿಹಾರಾಮ। ಶಕ್ತಾಯುಧಾಯ। ಎಂದಿದೆ ಅಂತ್ಯದಲ್ಲಿ

ಪ್ರದಾಪಯೆತ್। ಆಚಾರ್ಯಂ ಪೂಜಾಯೆತ್ತತ್ರ ವಸ್ತ್ರಾಲಂಕಾರಣಾಧಿಕಿಃ ಪ್ರಣಮ್ಯಂ ದಂಡವದ್ಭೂಮೌ ಪಾರ್ಥಯಿತ್ವಾ ವಿಸರ್ಜಯೇತ್॥ ಶ್ರೀ ರಾ॥ ಇತಿಶ್ರೀ ಭವಿಷ್ಯೋತ್ತರ ಪುರಾಣೆ ಭೀಷ್ಮಯುಧಿಷ್ಠಿರ ಸಂವಾದೆ ಅಮಾಸೋಮವ್ರತ ಕಥಾ .ಶ್ರವಣಂ ಸಂಪೂರ್ಣಂ॥ ಶ್ರೀ ಲಕ್ಷ್ಮಿವೆಂಕಟೇಶಾ॥

೯. ನಂ೬೮ರ ಕೃತಿಯು ಕುಮಾರವಾಲ್ಮೀಕಿಯು ರಚಿಸಲ್ಪಟ್ಟ ರಾಮಾಯಣವಾಗಿದ್ದು ಇದರ ಆದಿಯಲ್ಲಿ

"ಶ್ರೀ ಗಣಾಧೀಪತಯೆನಮಃ। ಶ್ರಿ ರಾಮಚಂದ್ರಾಯನಮಃ ಶ್ರಿ ಮೂಕಾಂಬಾಯನಮಃ॥ ವಾಲ್ಮೀಕಿ ರಾಮಾಯಣ ಬರುದಕ್ಕೆ ನಿರ್ವಘ್ನಮಸ್ತು ಶುಭಮಸ್ತು॥ ಶ್ರೀ ಶಾರದಾಂಬಾಯನಮಃ॥ ಎಂದಿದ್ದು ಅಂತ್ಯದಲ್ಲಿ

ಅಂತ್ತು ಸಂಧಿ ೧೧೪ ಕ್ಕಂ ಪದ ೫೨೧೬ ಕ್ಕಂ ಮಂಗಲ ಮಹಾಶ್ರೀ ಶ್ರೀ ಶ್ರೀ ಶ್ರೀ ಶ್ರೀ ಗಣಾಧಿಪತಯೇ ನಮಃ ಶಾರದಾಗುರುಭ್ಯೋನಮಃ ಶ್ರೀ ರಾಮಚಂದ್ರಾಯ ನಮಃ ಶ್ರೀ ಶುಭಮಸ್ತು। ನಿರ್ವಿಘ್ನಮಸ್ತು ಯಾದ್ಬಶ್ರೀ ಪುಸ್ತಕಂ ದೃಷ್ಟಾ ತಾದ್ರುಶಂ ಲಿಖಿತಂ ಮಯಾ ಅಪದ್ಧೋ ವಾಸುಬದ್ಧೋವಾ ಮಮ ದೋಷೋನ ವಿದ್ಯತೆ।

ಸ್ವಸ್ತಿಶ್ರೀ ಜಯಾಭ್ಯುದಯ ಶಾಲಿವಾಹನ ಶಕವರುಷ ೧೭೯ನೇ ವರ್ತಮಾನಕ್ಕೆ ಸಲುವ ಪ್ಲವಂಗ ಸಂವತ್ಸರದ ಪುಷ್ಯ ೩ ಯಿಂದು ವಾಸರದಲ್ಲಿ ಬರದು ಮುಗಿಶಿದ ರಾಮಾಯಣದ ಪುಸ್ತಕಕ್ಕೆ ಅಚಂದ್ರಾರ್ಕಮಸ್ತು॥ ಯೀ ಪುಸ್ತಕ ಬರದಾತ ಶೆಷ್ಯಯ್ಯ ಶ್ರೀ ರಾಮಚಂದ್ರಾಯ ಪರಬ್ರಹ್ಮಣೇನಮಃ ಶ್ರೀ ಶ್ರೀ ಶ್ರೀ ಮೂಕಾಂಬಾಯೆನಮಃ ಶ್ರೀ॥ ಎಂದು ಪ್ರತಿಕಾರ ತನ್ನ ಮಾಹಿತಿ ಮತ್ತು ಕಾಲವನ್ನು ತಿಳಿಸಿದ್ದಾನೆ.

೧. ನಂ೫೪ ರ 'ಶ್ರೀಕೃಷ್ಣ ಕರ್ಣಾಮೃತ ಶ್ಲೋಕರತ್ನ' ಕೃತಿಯನ್ನು ಶ್ರೀ ಕೃಷ್ಣದಾಸ ಲೀಲಾ ಶುಕಮುನಿ ರಚಿಸಿದ್ದಾನೆ. ಇದರ ಆದಿಯಲ್ಲಿ ಓಲೆಪುಟ ೧ ಬದಿಯಲ್ಲಿ ಅವಿಘ್ನಮಸ್ತು। ಶುಭಮಸ್ತು। ಕರ್ಣಾಮೃತ ಶ್ಲೋಕಾಲು ಪ್ರಥಮ ಅಧ್ಯಾಯಃ । ಎಂದಿದ್ದು ಅಂತ್ಯದಲ್ಲಿ ಕರ್ಣಾಮೃತ ಸ್ತೋತ್ರರತ್ನ ತೃತೀಯಾಧ್ಯಾಯಃ ಶ್ರೀ ಕೃಷ್ಣಾರ್ಪಣಮಸ್ತು ಶ್ರೀ ರಾಮಾರ್ಪಣಮಸ್ತು ಮಂಗಳ ಮಹಾಶ್ರೀ ಶ್ರೀ ಶ್ರೀ ಶ್ರೀ ಚಯುನೂ। ಕರತವೃತ ಮಪರಾಧಂ ಕ್ಷಂತುಮರ್ಹಂತ್ತಿ॥ ಪ್ಲವಂಗನಾಮ ಸಂ॥ ರ ಕಾರ್ತಿಕ ಶು೧೫ ವಕ್ಕೆ ಜಾಲಕುಂಟೆ ವೆಂಕಟಪ್ಪ ಬರೆದ ಕರ್ಣಾಮೃತ ಶ್ಲೋಕ ತೃತೀಯ ಸಂಪೂರ್ಣ ಶ್ರೀ ವೇದವ್ಯಾಸಾಯನಮಃ ॥ಶ್ರೀರಾಮ॥ ಎಂದಿರುವುದು ಕಂಡು ಬರುತ್ತದೆ.

**ಈ ) ಇತರೆ ಲಿಪಿಕಾರರು:-**

ತಮ್ಮ ಹವ್ಯಾಸಕ್ಕೊ ಅಥವಾ ಇನ್ನಿತರ ಉದ್ದೇಶಗಳಿಗ ಪ್ರತಿಮಾಡಿ ಕೊಂಡಿರುವರು ಇವರು. ಎಲ್ಲೂ ತಮ್ಮ ಧರ್ಮ, ನಾಮ, ದೈವಗಳ ಹೆಸರನ್ನು ಉಲ್ಲೇಖಿಸಿರುವುದಿಲ್ಲಾ ಇಂತವರನ್ನು ಈ ಕೆಳಗಿನಂತೆ ಕಾಣಬಹುದು. ಇವರನ್ನು ಸಾಮಾನ್ಯವಾಗಿ ವೈದಿಕರೆಂದು ವರ್ಗೀಕರಿಸಬಹುದು.

೧) ಓ೪೫ ಇದು ಗದ್ಯಭಾಗದಲ್ಲಿದ್ದು ರಾಮಾಯಣದ ಘಟನೆಗಳನ್ನಾಧರಿಸಿದ ಜ್ಯೋತಿಷ್ಯ ಗ್ರಂಥವಾಗಿದೆ ಆದರೆ ಕವಿ, ಲಿಪಿಕಾರರ ಉಲ್ಲೇಖ ಕಂಡು ಬಂದಿಲ್ಲಾ.
ಮಾದರಿ: ನೀನು ಕೇಳುವ ಪ್ರಶ್ನೆಯು। ಶುಭಸಿದ್ಧಿಯಾಗಿಯಿರುವದೂ। ಅದು ಹ್ಯಾಗೆ ಯಂದರೆ ವನಾಂತರದಲ್ಲಿ ಯಿದ್ದಂತ ರಾಮ ಲಕ್ಷ್ಮಣರಂನ್ನು। ಬರತ ಶತ್ರುಗ್ನರು ಜಾಂಬರಂ ಕಳುಹ್ಸಿ ರಾಮಸ್ವಾಮಿಯವರ। ಯೋಗಕ್ಷೇಮ.

ಈಕೃತಿ ಅಸಮಗ್ರವಾಗಿದ್ದು. ಪುಟಸಂಖ್ಯೆಗಳು ಕ್ರಮವಾಗಿಲ್ಲ ಬಹಳಷ್ಟು ಗರಿಗಳಿಗೆ ಎರಡೆರಡು ಪುಟಸಂಖ್ಯೆಗಳಿವೆ ಓಲೆ ಪ್ರತಿ ೨೨ ಮತ್ತು ೪೧ರಲ್ಲಿಯೂ ಪ್ರಶ್ನೆಶಾಸ್ತ್ರ ಗ್ರಂಥಗಳಿವೆ. ಇಲ್ಲಿ ಯಾವುದೇ ಇಷ್ಟದೈವ ಮತ್ತು ಧರ್ಮದ ಸ್ತುತಿ ಕಂಡು ಬಂದಿಲ್ಲಾ.

೨. ಓ೩೩೧ ಸಂಖ್ಯೆಯ ಓಲೆಗರಿಗಳಲ್ಲಿ ಮಂತ್ರಗಳು ಮತ್ತು ಅಭ್ಯಾಸ ಪತ್ರಗಳು ಸಂಸ್ಕೃತ ಮತ್ತು ಕನ್ನಡದಲ್ಲಿರುವುದು ಕಂಡು ಬರುತ್ತದೆ ಆದರೆ ಇಲ್ಲಿ ಯಾವುದೇ ಕವಿ, ಕಾಲ, ಪ್ರತಿಕಾರ, ಧೈವ ಉಲ್ಲೇಖವಾಗಿಲ್ಲ
ಮಾದರಿ: ತಾದೀಯ ಮಾತ್ರಾಂದಿತ ಮೂರ್ತಸಾದೋರ್ಗು ಹಾನಿಬದ್ದ ಪ್ರತಿಶಬ್ದ ದೀರ್ಘ॥

ರಶ್ಮಿಸ್ಯ ವದಾಯನಗೇಂದ್ರ ಸಂಕ್ರನ್ನಿ ವತೀಯ ಮಾಸನೃಪಸ್ಯದೃಷ್ಟಿ ಸಪಾಟ ಲಾಯಾಂಗ ವಿತಸ್ತಿವಾರಿ ಸಂಧಾನು ಧರ ಕೇಸರಿಣಂದ ದರ್ಶ॥ ಆದಿತ್ಯ

ಕಾಯಮಿವಧಾತುವಯ್ಯಂ ಲೋದ್ರ ಧೂಮಂಸಾನುಮತಃ ಪ್ರಮುಲ ಎಂದಿದೆ ಈ ಗರಿಗಳಿಗೆ ಮಸಿಲೇಪನವಾಗಿಲ್ಲ ಮತ್ತು ಯಾವುದೇ ಪುಟಸಂಖ್ಯೆಯನ್ನು ನಮೂದಿಸಿಲ್ಲ ಇದು ಅಸಮಗ್ರವಾಗಿದ್ದು ಹಲವುಗರಿಗಳು ತ್ರುಟಿತವಗಿವೆ ಓದುವುದು ಸ್ವಲ್ಪ ತ್ರಾಸದಾಯಕವಾಗಿದೆ,

೩. ನಂಬ।೫೪।೧ ಸಂಖ್ಯೆಯ ವಿಶ್ವಾಮಿತ್ರ ಸಂಹಜಿತವನ್ನು ಬರೆದ ಲಿಪಿಕಾರ ಎಲ್ಲೂ ತನ್ನ ಕಾಲ, ಹೆಸರನ್ನು ಹೇಳಿಕೊಂಡಿಲ್ಲ ಇದರ ಆದಿ ಓಲೆ ಪುಟ ೨ ರಲ್ಲಿ
"ಉತ್ತಮಾ ಪೂರ್ವಸೂರ್ಯಾ ಮಧ್ಯಮಾ ಮಧ್ಯ ಸೂರ್ಯತಾ। ಅಧಮಾ ಪಶ್ಚಿಮಾದಿತ್ಯ ಮಧ್ಯ ಸಂಧ್ಯಾ ತ್ರಿಧಾಮತಾ".॥
ಚತುರಕ್ಷಣಾಸಂಕ್ತಾ ಕ್ರಮೇಣ ವಸು ಸಂಖ್ಯಾಯ।
ಏವಂ ಜ್ಞಾತ್ವಾ ಪ್ರಭಾತಾಯಂ ಪಡಾಧಾ XX || ಎಂದಿದ್ದು
ಅಂತ್ಯದಲ್ಲಿ

ಅನ್ನದಾನಂ ಸದಾ ಕುರ್ಯಾದೇತ ಭೋತಿಯ ಲಕ್ಷಣಂ
ತ್ವಕ್ತ್ವ ತುದುರಹಾಂಕಾರಂ ಕಶ್ವ ನಿಷ್ಕಾಯ XXX ||



೧೯ನೇ ಗರಿಯ ಹಿಂಭಾಗದಲ್ಲಿ "ಇತಿ ಶ್ರೀ ವಿಶ್ವಾಮಿತ್ರ ಸಂಹಿತಾಯಾತ್ರಿ ಕಾಲವಿಧಿ ಯೋಗಾನಾಮಷಷ್ಠೋಧ್ಯಾಯಃ" ಎಂದಿದೆ ಹಾಗೆಯೇ ೨೨ ೨೩ನೇ ಗರಿಗಳಲ್ಲಿ ಅದೇ ವಿಶ್ವಾಮಿತ್ರ ಸಂಹಿತೆಯ" ಆವಾಹನಾದಿನ್ಯಾಸವಿಧಿ ಯೋಗನಾಮ ಸಪ್ತಮೋದ್ಯಾಯ ಮತ್ತು " ನಿತ್ಯಾ ಪಾಸನವಿಧಿ ಯೋಗನಾಮ ದಶಮೋಧ್ಯಾಯ": ಎಂದಿದೆ

೪. ನಂಬ।೭೭ ರ ಕೃತಿಯು 'ವೈದ್ಯಶಾಸ್ತ್ರ' ವಾಗಿದ್ದು ರೋಗಗಳ ಲಕ್ಷಣ ಮತ್ತು ಚಿಕಿತ್ಸೆಗಳನ್ನು ತಿಳಿಸಲಾಗಿದೆ.

ಲಿಪಿಸುಂದರವಾಗಿ ಸ್ಪುಟವಾಗಿವೆ ಆದರೆ ಕೃತಿ ಅಸಮಗ್ರವಾಗಿದೆ ೮,೩೫,೪೫,೪೬ನೇ ಸಂಖ್ಯೆಯ ಪತ್ರಗಳು ಮತ್ತು ಒಂದು ಬಿಡಿಗರಿ ಮಾತ್ರ ಇವೆ, ಗರಿಗಳ ಬದಿಯಲ್ಲಿ ರೋಗಗಳ ಹೆಸರನ್ನು ಬರೆಯಲಾಗಿದೆ, ಬಿಡಿಗರಿ ಮತ್ತು ಪತ್ರ ಸಂಖ್ಯೆಗಳಿಗೆ ಮಸಿ ಲೇಪನವಿಲ್ಲ ಬಿಡಿಗರಿಯ ಒಂದು ಬದಿಯಲ್ಲಿ ನಾರಿಲಿಪಿಯಿದೆ ಇನ್ನೊಂದು ಬದಿಯಲ್ಲಿ "ಸಕಲವ್ಯಾದಿಗಳ ಪ್ರಭಾವವೇರಸಾ" ಎಂದೂ "ಮೂಲದ ರಸದಲ್ಲಿ ಕೊಡುವುದು । ಪಥ್ಯಾ ಹಾಲೋಗರ ಮಾಫವಾದರೆ ಸಖರೆ ಯಳನೀರು ಕೊಡುವುದು । ಮಜ್ಜಿಗೆ ಕೊಡುವುದು। ಸಂನ್ನಿಮಾಂಣ್ಣು । ಸಕಲ ವ್ಯಾಧಿಗೆ ಪ್ರಭಾವೇರಸಾ" ಎಂದೂ ಕನ್ನಡ ಗದ್ಯದಲ್ಲಿದೆ, ಆದರೆ ಎಲ್ಲಿಯೂ ಕೃತಿಕಾರ ತನ್ನ ಹೆಸರು ಕಾಲವನ್ನು ಉಲ್ಲೇಖಿಸಿಲ್ಲಾ.

## ಉ) ಮಹಿಳಾ ಲಿಪಿಕಾರರು

ಬಿ.ಎಂ.ಶ್ರೀ. ಪ್ರತಿಷ್ಠಾನದ ಸಂಗ್ರಹ ಮತ್ತು ಪ್ರಕಟಣೆಯ ಹಸ್ತಪ್ರತಿಗಳ ಚರಿತ್ರೆಯನ್ನು ಅವಲೋಕಿಸಿದಾಗ ನಮಗೆ ಪುರುಷ ಲಿಪಿಕಾರರ ನಿದರ್ಶನ ಹೆಚ್ಚು ದೊರೆಯುತ್ತದೆ. ಆದರೆ ಸ್ತ್ರೀ ಲಿಪಿಕಾರರ ಉಲ್ಲೇಖಗಳು ಸಿಗುವುದು ಬೆರಳೆಣಿಕೆಯಷ್ಟು ಮಾತ್ರ. ಪ್ರಾಚೀನ ಸಮಾಜದಲ್ಲಿ ಜೈನ ಮತ್ತು ಬೌದ್ಧ, ವೀರಶೈವ ವೈಷ್ಣವ ಧರ್ಮದ ಮಹಿಳೆಯರಿಗೂ ಸಹ ಶಿಕ್ಷಣದೊಂದಿಗೆ ಬರೆಯುವ ಕಾರ್ಯವನ್ನು ವೃದ್ದಿಸಿಕೊಳ್ಳಲು ವಿಶೇಷ ಪ್ರೋತ್ಸಾಹವನ್ನು ನೀಡುತ್ತಿದ್ದವು ಎಂಬುದು ತಿಳಿದು ಬರುತ್ತದೆಯಾದರೂ ಮಹಿಳಾ ಲಿಪಿಕಾರರು ಕಾಣದಿರುವುದು ಯೋಗ್ಯವಾಗಿದೆ.

ಪ್ರಾಚೀನ ಕಾಲದಲ್ಲಿ ಸ್ತ್ರೀಯರು ವೇದ ಉಪನಿಷತ್ತು ಪುರಾಣ ವಿಚಾರಗಳನ್ನು ತಿಳಿಯುವುದನ್ನು ಕೆಲವೊಂದು ಧರ್ಮಗಳು ಕಟ್ಟು ನಿಟ್ಟಾಗಿ ನಿಷೇಧಿಸಿದ್ದರೂ ಕೆಲವೊಂದು ಸಂದರ್ಭದಲ್ಲಿ ಗಾರ್ಗಿ ಮೈತ್ರೇಯಿ, ಇಂದ್ರಾಣಿಯಂತ ಮಹಿಳೆಯರು ಎಲೆಮರೆಯಕಾಯಿಯಂತಿದ್ದು ಉಪನಿಷತ್ತು ವೇದಗಳನ್ನು ಕಲಿತ ಮೇದಾವಿಗಳಾಗಿದ್ದರು ಎಂಬುದನ್ನು ಅರಿತರೆ ಕೆಲವೊಂದು ಪುರಾಣ ಶಾಸ್ತ್ರ ಕಥೆಗಳನ್ನು ಕಿವಿಯಿಂದಲೂ ಸ್ತ್ರೀಯರು ಕೇಳುವುದು ತಪ್ಪೆಂಬಂತಿದ್ದ ನಿಯಮಗಳ ಸಡಿಲತೆಯನ್ನು ತಿಳಿಸುತ್ತದೆ.

ಮಹಿಳೆಯರು ಮಕ್ಕಳನ್ನು ಹೆರುವ ಯಂತ್ರಗಳಾಗಿದ್ದುಕೊಂಡೇ ತಮ್ಮ ಮನಸ್ಸಿನಲ್ಲಿರುವ ಆಸಕ್ತಿ ಜ್ಞಾನಾರ್ಜನೆಯ ಕ್ಷೇತ್ರಗಳ ಕಡೆ ಪುರುಷನಂತೆ ಗಮನಹರಿಸಿ ತನ್ನ ಮಕ್ಕಳು ಮರಿಗಳಿಗೆ ಸಂಗೀತ ಚಿತ್ರಕಲೆ, ನರ್ತನ ಮೊದಲಾದ ಶಾಸ್ತ್ರಗಳನ್ನು ಹೇಳಿಕೊಡುತ್ತಿದ್ದರು.

ಹಸ್ತಪ್ರತಿಗಳಲ್ಲಿ ಬಹಳಷ್ಟು ಪ್ರತಿಕಾರರು ತಮ್ಮ ಹೆಸರು ವೃತ್ತಾಂತ ಏನನ್ನು ತಿಳಿಸದೇ ಹೋಗಿದ್ದಾರೆ ಹೀಗಿರುವ ಪ್ರತಿಗಳಲ್ಲಿ ಮಹಿಳಾಪ್ರತಿಕಾರರೇ ತಮ್ಮ ಹೆಸರನ್ನು ಲಿಖಿಸದ ಮಣಿ ಮುಕಟಗಳಿರಬೇಕೆಂಬುದು ಅಧ್ಯಯನದಿಂದ ತಿಳಿದುಬರುತ್ತದೆ.

ನಮ್ಮ ಭಾರತೀಯ ಮಾವಂದಿರುಗಳು ತಮ್ಮ ಮುದ್ದು ಮಗಳನ್ನು ವರನಿಗೆ ಕೊಡಬೇಕಾದರೆ ಅವನು ಕುಮಾರವ್ಯಾಸ ಭಾರತ, ಜೈಮಿನಿಭಾರತ, ಅಥವಾ ರಾಜಶೇಖರ ವಿಳಾಸವನ್ನು ಅವರ ಮುಂದೆ ಪಠನೆ ಮಾಡುವಂತೆ ವರ ಪರೀಕ್ಷೆ ಮಾಡುತ್ತಿದ್ದುದರ ಹಿನ್ನೆಲೆಯಲ್ಲಿ ವಿವಾಹವಾದನಂತರ ಇವುಗಳ ವಿಚಾರಧಾರೆಗಳನ್ನು ತತ್ವಗಳನ್ನು ನನ್ನ ಮಗಳಿಗೂ ಕಲಿಸಲಿ, ಹೇಳಿಕೊಡಲಿ ಎಂಬಂತಹ ಮಹದುದ್ದೇಶವನ್ನು ಇಟ್ಟುಕೊಂಡಿರುವಂತೆ ಕಾಣುತ್ತದೆ. ಎಂಬ ಎಂ.ವಿ.ಸೀತಾರಾಮಯ್ಯನವರ ಮಾತನ್ನು ಇಲ್ಲಿ ಗಮನಿಸಬಹುದು.

ಹೀಗೆ ಬಿ.ಎಂ.ಶ್ರೀ.ಪ್ರತಿಷ್ಠಾನದ ಪ್ರಕಟಣೆ ಮತ್ತು ಸಂಗ್ರಹದಲ್ಲಿರುವ ಹಸ್ತಪ್ರತಿಗಳ ಪುಷ್ಪಿಕೆಗಳನ್ನು (Colophons) ಗಮನಿಸಿದಾಗ ಹಲವಾರು ಮಹಿಳಾ ಲಿಪಿಕಾರರುವಿರುವುದನ್ನು ಗಮನಿಸಬಹುದಾಗಿದೆ. ನಕಲುಗೊಳಿಸಿದ ಪ್ರತಿಗಳ ಕೊನೆ ಬುಡಗಳಲ್ಲಿ ಅವರ ಆದರ್ಶ ಪ್ರಶಸ್ತಿಗಳು ಅವರು ಪಡೆದ ಶಿಕ್ಷಣ ಕ್ರಮ ಮತ್ತು ಧಾರ್ಮಿಕ ಚೌಕಟ್ಟಿನ ಹಿನ್ನೆಲೆಯಲ್ಲಿ ಹೇಗೆ ಪ್ರತಿಕಾರ್ಯ ಮಾಡಿದರು ಮತ್ತು ಇದರಿಂದ ಪಡೆದಂತ ಫಲಾಫಲಗಳ ಉಪೇಕ್ಷೆ ಮಾಡಿದ್ದಾರೆ. ಈ ಕೆಳಗಿನ ಉದಾಹರಣೆಗಳನ್ನು ನೋಡಬಹುದು.

೧. ಪ್ರತಿಷ್ಠಾನದ ಪ್ರಕಟಣೆಯಾದ ಅಲಿಗೆ ಕೆಳಗಣ ಮನೆಯ ಹಸ್ತಪ್ರತಿ ಸೂಚಿಯಲ್ಲಿ ವಿ.ಎಂ.ಲಕ್ಷ್ಮಮ್ಮ ಎಂಬ ಪ್ರತಿಕಾರ್ತಿದೊರೆತಿದ್ದು ಇವರು ಹಲವಾಘು ದೇವರ ನಾಮಗಳನ್ನು ಸ್ತುತಿಸಿರುವ ಕಾಗದ ಪ್ರತಿ ದೊರೆಯುತ್ತದೆ (ಕಾ೨೨) ಇದು ಪೂರ್ಣ ಕೃತಿಯಾಗಿದ್ದು ೧೯೩೪ರಲ್ಲಿ ನಡೆದ ತಮ್ಮ ವಿವಾಹದ ನಂತರ ಪತಿಯ ಮನೆಯಲ್ಲಿದ್ದ 'ಪದ್ಯಸಂಗ್ರಹ' ಪುಸ್ತಕದಲ್ಲಿನ ಕೆಲವು ಸ್ತೋತ್ರಗಳ ಸಾಲುಗಳನ್ನು ಇದರಲ್ಲಿ ಅಳವಡಿಸಿದ್ದಾರೆ ಅಲ್ಲದೆ ಪ್ರತಿಕಾರರು ಮದುವೆಗೆ ಮೊದಲು ಸಂಗೀತವನ್ನು ಕಲಿತಿದ್ದು ಮದುವೆಯಾದ ಕೆಲವೇ ವರ್ಷಗಳ ನಂತರ ಸಂಗೀತದ ಅಭ್ಯಾಸವನ್ನು ನಿಲ್ಲಿಸಿದರು ಎಂಬುದು ಹಿರಿಯರಿಂದ ತಿಳಿದ ವಿಷಯವಾಗಿದೆ ಈ ಕಾರಣಗಳಿಂದಾಗಿ ಪ್ರತಿಯ ಕಾಲ ಸುಮಾರು ೧೯೪೦ ಎಂದು ನಿರ್ದರಿಸಲಾಗಿದೆ.

ಈ ಕೃತಿಯ ಆದಿಯಲ್ಲಿ ಪರಮಾತ್ಮಹರೇ ಪಾವನಾನಾಮ. ಪಾಮರನೊಳು ಕೃಪೆಯ ತೋರಿದ್ಯೆಯ್ಯೆ ಸ್ವಾಮಿ॥ ಇಳೆಯೊಳು ಜನ್ಮವಾ ಅರಿಯದಾಯನ್ನನು ಶ್ರೀಲೋಲನೆ ಅತಿ ಪ್ರೇಮದೆ ನೀ ಕಾಯ್ಯೆ॥ ಬಳಲಿದಯ್ಯೆ ಸ್ವಾಮಿ ತರಳನಾ ಆದರಿಸಲು। ಕುಲಗೋತ್ರವಿಲ್ಲದಾ ಮನುಜನಾ ಪಾಲಿಸಿದೆ ದೇವಾದೇವನೆ ಭಕ್ತ ಭಾಂಧವನೆ ಕಾಯ್ಯೆ॥ ಪರಮಾತ್ಮಹರೇ॥ ಸುಜನಜೀವನಾರಾಮ ಸುಗುಣಭೂಷಣಾರಾಮ॥ ಭುಜಗಭೂಷಣಾರ್ಚಿತ ಭುಜದನಾವನಾ ಅಜವಂದಿತ ದೃತ ಚಂದನ ದಶತುರಂಗಮಾ॥ ಚಾರುನೇತ್ರ ಶ್ರೀಕಳತ್ರ ಶ್ರೀ ರಮ್ಯಗಾತ್ರಾ॥ ತಾರಕಾಧಿ ಪಾನನಧರ್ಮ ಪಾಲನಾತಾರಯ ರಘವರ ನಿರ್ಮಲ ತ್ಯಾಗರಾಜಸನ್ನೂತ॥ ಎಂದಿದ್ದು ಇದರ ಅಂತ್ಯದಲ್ಲಿ ಹಾರ್ಮೋನಿಯಂ ಮತ್ತು ಸಂಗೀತ ಕಲೆಯ ಬಗ್ಗೆ ವಿವರವಿದೆ.

ಕೃತಿಯ ಅಂತ್ಯದಲ್ಲಿ ಹಲವಾರು ರಾಗ ತಾಳ ರೂಪಕಗಳನ್ನು ತಿಳಿಸಿದ್ದಾರೆ ಅಲ್ಲದೆ ಪ್ರತಿಕಾರರು 'ಅಂತ್ಯ' ದ ಹಲವೆಡೆ ಮಹಾಪ್ರಾಣದ ಬದಲು ಅಲ್ಪಪ್ರಾಣದ ಅಕ್ಷರಗಳನ್ನು ಬರೆದಂತಿದೆ.

೨. ೦೬೧೧ರ ವಿಪ್ರೊತಮ್ಮ ಅಪ್ಪಣ್ಣ ಕವಿಯ ರತಿಮತ್ತು ಮನ್ಮಥರ ವಿವಾಹ ಪ್ರಸಂಗವನ್ನು ಯಕ್ಷಗಾನ ರೂಪದಲ್ಲಿ ಪ್ರತಿ ಮಾಡಿರುವ ಇದರ ಆದಿಯಲ್ಲಿ ಶ್ರೀ ಗಣಾಧಿಪತಯೇನಮಃ॥

ನಿರ್ವಿಘ್ನಮಸ್ತು॥ ನಿತ್ಯಮಾಂಗಲ್ಲಮಸ್ತು॥ ಶ್ರೀ ಶಾರದಾಗುರುಭ್ಯೋನಮಃ॥ ಭಾಗವತದೊಳಗಣಪುನಃ ರತಿಸ್ವೀಯಂವರ ಯಕ್ಷಗಾನದಲ್ಲೂ ಬಾರವ ಬಗ್ಗೆ। ಅಚಂದ್ರಾರ್ಕಮಸ್ತು॥ ಶ್ಲೋಕಾ॥ ಶ್ರೀ ರಾಧಾವದನಾಬ್ಜ। ಘಘ್ವದಮತೀಂ। ಜ್ಞಾನ ಪ್ರದಂ ಸುಂಧರಂ। ಎರಾವಾಗರಖಂರ। ಮದರಾಶರವರಂ। ಭೋದಾನಿಲಂ ಭಾವರಂ। . . . . . .ಕರುಣಾಂಬುದೇ ಶೂರ। ಕಾಮಶರದೂರಾ। ಶರಣು ಶರಣು॥೧॥ ಎಂದಿದ್ದು ಇದರ ಅಂತ್ಯದಲ್ಲಿ

ಶುಭಾಮಂಗಳಂ॥ ಮಂಗಲಪ್ರದಾಯಕಾಯ। ಮಂಗಲದೇವಾತಗವ। ಲಿಂಗನಾಗಂ ಕೊಪ್ಪಣಾಯ।ಜಯಮುಗಲಂ॥ ಗಂಗಜನಕಾಯ॥ಸೂವಿಹಂಗತೂರಾಯ।ದೆವೊತ್ತುಂಗ ವೆಂಕಟಾಚಲಾಯ ಶುಭಮಂಗಲಂ॥ ಯಿತ್ತಿ ಶ್ರೀ ವಿಪ್ರೊತುಮ ಅಪ್ಪಂಣ್ಯವಿರಚಿತ। ರತಿಸ್ವಯಂವರ ಸಂಪೂರ್ಣಂ॥ ಯುವ ಸಂ। ಶ್ರಾವಣಬ ೧೩ ಬಾರ್ಗವಾಸ್ರಿತ್ಸಾಲ ೧೧ ರಲ್ಲೂ ಬೆಳರೆ ಸಿವೆಗಉರಿ ಗದೆಮೆನೆಯಲು ಬರೆದ ಶಂಭಾಸುರನ ಕಾಳಗ ಪ್ರಸಂಗ ಲವಣಪುರದ ಶ್ರೀ ಲಕ್ಷ್ಮೀನರಸಿಂಹನ ಪೂರ್ಣ ಕಟಾಕ್ಷಯದಿಂದ ಬರೆದುಯಿದೆನೆ। ಅಕ್ಷರ ಭೆದ ತಪ್ಪುಯಿದಾಗ ವಪ್ಪಿಟ್ಟು ಹೇಳುವುದು ಬೈಯಲಾಗದು। ಅಂತ್ತು ಪ್ರಸಂಗ ೧ ರಕ್ಕೆ ಪದ ೪೦೫ಕಾಂ ಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ.

ಇಲ್ಲಿ ಪ್ರತಿಕಾರರ ಹೆಸರು 'ಸಿವೆಗಉರಿಯೇ'? ಅಥವಾ ಬೆಳರೆ 'ಸೀಮೆಯ' ಗಉರಿಯೇ? ಹಾಗಿದ್ದಲ್ಲಿ ಸ್ತ್ರೀಯೆ? ಇರಬೇಕೆಂದು ನಿರ್ಧರಿಸಬಹುದು.

ಈ ಎಲ್ಲಾ ಸಾಂಸ್ಕೃತಿಕ ವಿಶೇಷತೆಗಳನ್ನು ಗಮನಿಸಿದಾಗ ಕನ್ನಡವನ್ನೇ ಮಾತೃಭಾಷೆಯಾಗಿಸಿಕೊಂಡಿದ್ದ ಲಿಪಿಕಾರರು ಹಲವಾರು ಗ್ರಂಥಗಳನ್ನು ಪ್ರತಿಮಾಡಿರುವುದರ ಜೊತೆಗೆ ಕನ್ನಡ ಭಾಷೆಯನ್ನು ಜೀವಂತವಾಗಿ ಉಳಿಸಿದರಲ್ಲದೆ ಕನ್ನಡ ಹಸ್ತಪ್ರತಿಗಳ ಮೊತ್ತವನ್ನು ಅಧಿಕವಾಗಿಸಿದ್ದಾರೆ.

ಈ ಲಿಪಿಕಾರರ ಪ್ರಶಸ್ತಿಗಳನ್ನು ಗಮನಿಸಿದಾಗ ಮನೆತನಗಳಿಗೆಯಿರುವ ವಿವಿಧ ಹೆಸರುಗಳು ಮತ್ತು ಸ್ಥಳ ಪರಿಚಯ ಮತ್ತು ಒಂದೇಮನೆಯಲ್ಲಿ ಹಲವಾರು ಪ್ರತಿಕಾರರು ವಾಸಿಸುತ್ತಿದುದ್ದು ವಿಶೇಷವಾಗಿ ಕಂಡು ಬರುತ್ತದೆ.

*(ಈ ಎಲ್ಲಾ ಲಿಪಿಕಾರರ ಮಾಹಿತಿಗಳನ್ನು ಬಿ.ಎಂ.ಶ್ರೀ.ಪ್ರತಿಷ್ಠಾನದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಮತ್ತು ಪ್ರತಿಷ್ಠಾನದ ಪ್ರಕಟಣೆಯಾದ ಅಲಿಗೆ ಕೆಳಗಣಮನೆಯ ಹಸ್ತಪ್ರತಿಗಳು ಎಂಬ ವರ್ಣನಾತ್ಮಕ ಸೂಚಿಯಿಂದ ಆಯ್ದುಕೊಳ್ಳಲಾಗಿದೆ.)

## ಅಧ್ಯಾಯ-೫

## ಲಿಪಿಕಾರರ ಸಾಂಸ್ಕೃತಿಕ ಸಂಗತಿಗಳು

ಬಿ.ಎಂ.ಶ್ರೀ. ಪ್ರತಿಷ್ಠಾನದ ಸಂಗ್ರಹದಲ್ಲಿರುವ ಹಸ್ತಪ್ರತಿ ಲಿಪಿಕಾರರ ಸಾಂಸ್ಕೃತಿಕ ಸಂಗತಿಗಳಿಗೆ ಎಲ್ಲೆಯೇ ಇಲ್ಲ ಹಸ್ತಪ್ರತಿಗಳನ್ನು ಬರೀ ಸಾಹಿತ್ಯ ದೃಷ್ಟಿಯಿಂದ ಅಧ್ಯಯನ ಮಾಡುವುದಲ್ಲಾ ಬದಲಾಗಿ ಅವುಗಳನ್ನು ಲಿಖಿಸಿದ ಲಿಪಿಕಾರರ ಇತಿಹಾಸ, ಧರ್ಮ, ಬದುಕಿನ ಪ್ರಜ್ಞೆ, ಕಲಾತ್ಮಕತೆ ಬಹುಮುಖಿಯಾಗಿ ಅಧ್ಯಯನ ಮಾಡಿದಾಗ ಲಿಪಿಕಾರರ ಸಾಂಸ್ಕೃತಿಕ ವಿಷಯಗಳಿಗೆ ಮಹತ್ವ ದೊರೆತಂತಾಗುತ್ತದೆ

ಅ) <u>ಲಿಪಿಕಾರರ ಲಿಪಿ, ಭಾಷೆ ಹಾಗೂ ಕಲಾತ್ಮಕತೆ</u>

ಪ್ರಾಚೀನ ಹಸ್ತಪ್ರತಿಗಳ ಲಿಪಿಕಾರರ ಲಿಪಿ ವೈವಿಧ್ಯಮಯವಾಗಿದೆ. ಪ್ರತಿಕಾರರಿಂದ ನಕಲುಗೊಂಡ ಹಸ್ತಪ್ರತಿಗಳು ಕೆಲವೊಂದು ಸುಂದರ ಲಿಪಿಗಳಿಂದ ಕೂಡಿದ್ದರೆ ಮತ್ತು ಕೆಲವೊಂದು ಕಾಕಲಿಪಿ, ದುರ್ಲಿಪಿಗಳಿಂದ ತುಂಬಿಹೋಗಿರುತ್ತವೆ. ಪ್ರತಿಷ್ಠಾನದ ಲಿಪಿಕಾರರು ಹಸ್ತಪ್ರತಿಗಳ ರಕ್ಷಾಕವಚಗಳ ಮೇಲೆ ವರ್ಣಚಿತ್ರ ಅಥವಾ ರೇಖಾಚಿತ್ರ ಬಿಡಿಸಿರುವುದು ಅವರ ಕಲಾಭಿರುಚಿಗೆ ಹಿಡಿದ ಕನ್ನಡಿಯಾಗಿವೆ.

ನಮಗೆ ಮೂಲ ಕೃತಿಕಾರನೇ ಬರೆದ ಹಸ್ತಪ್ರತಿಗಳು ದೊರೆಯುವುದು ಸ್ವಲ್ಪಕಷ್ಟ ದೊರೆಯುವ ಪ್ರತಿಗಳೆಲ್ಲವೂ ನಕಲುಗಳೇ, ಆದರೆ ಪ್ರತಿಷ್ಠಾನದಲ್ಲಿ ಆನೇಕ ಪ್ರತಿಗಳು ಮೂಲ ಹಸ್ತಪ್ರತಿಗಳಾಗಿರುವುದು ವಿಶೇಷವಾಗಿದೆ. ತಿಮ್ಮಪ್ಪದಾಸರ ಕೃತಿಗಳು, ಕೀರ್ತನೆಗಳು ಮೂಲಪ್ರತಿಗಳಾಗಿವೆ. ಇವರು ಅದ್ವೈತ ಹರಿದಾಸರಾಗಿದ್ದು ಇವರ ಕೀರ್ತನೆಗಳಿಂದ ಹರಿದಾಸ ಸಾಹಿತ್ಯದಲ್ಲಿ ಅದ್ವೈತ ಪರಂಪರೆಯ ಆಯಾಮ ಬಂದಿದೆ ಎಂಬ ಡಾ॥ನಾ.ಗೀತಾಚಾರ್ಯರ ಮಾತು ಗಮನಾರ್ಹವಾಗಿದೆ. ನಕಲುಗೊಳಿಸುವಾಗ ಅನೇಕ ಪ್ರತಿಕಾರರು ವಿವಿಧ ರೀತಿಯ ಭಾಷಾಲಿಪಿಯನ್ನು ಉಪಯೋಗಿಸಿದ್ದಾರೆ. ಇದರ ಉದ್ದೇಶವೇನೆಂದರೆ ಆಯಾ ಪ್ರಾಂತ್ಯದ ಜನರ ಮನೋಗತರೂಡಿಗೆ ತಕ್ಕಂತೆ ಕನ್ನಡ, ತೆಲುಗು, ತುಳು, ತಿಗಳಾರಿ, ನಾಗರಿ, ನಂದಿನಾಗರಿ ಮುಂತಾದ ಹಲವು ಲಿಪಿಗಳನ್ನು ಉಪಯೋಗಿಸಿರುವುದು ಕಂಡು ಬರುತ್ತದೆ.

ಉದಾ:- ಪ್ರತಿಷ್ಠಾನದ ಸಂಗ್ರಹದಲ್ಲಿರುವ ನಂ/ಓ/೧೯/೩ರ 'ಚಂದ್ರಾಲೋಕಲಕ್ಷ್ಮಲಕ್ಷಣ ಸಂಗ್ರಹ' ಎಂಬ ಸಂಸ್ಕೃತ ಅಲಂಕಾರ ಗ್ರಂಥ ಬರೆದ ಕೃತಿಕಾರನ ಪ್ರತಿಗಳಲ್ಲಿ ೬೬, ೬೭, ೬೮, ಗರಿಗಳಲ್ಲಿ ನಾಗರಿ ಲಿಪಿಯ ಒಂದು ಗ್ರಂಥವಿದೆ ಅಲ್ಲದೆ "ಶ್ರೀ ರಾಮಾಯ ಕಲ್ಯಾಣಂನ: ಪ್ರಭೋತುಂಗೊಪರಸ್ಮೈ ಪುರು x ತಥದನು ಯದುನಂಚಿದನ: ಯದ್ಯಭವಿಷ್ಯಂತದಾ"॥ ಎಂದು ಕನ್ನಡ ಲಿಪಿಯಲ್ಲಿ ಬರೆಯಲಾಗಿದೆ.

ಬಿ.ಎಂ.ಶ್ರೀ ಪ್ರತಿಷ್ಠಾನದ ಸಂಗ್ರಹದ ಹಸ್ತಪ್ರತಿಗಳಲ್ಲಿ ಪ್ರತಿಕಾರನ ಕಲಾತ್ಮಕತೆಯು ತಾಡವೋಲೆ ಕಟ್ಟುಗಳ ಮರದಹಲಗೆಯ ಮೇಲೆ ಇಲ್ಲವೆ ಕಾಗದದ ಪ್ರತಿಗಳ ಮೇಲೆ ಸುಳುಹು, ರೇಖಾಚಿತ್ರ ತ್ರಿಜ್ಯಚಿತ್ರಗಳನ್ನು ಬಿಡಿಸಿರುವುದರಲ್ಲಿ ಅಭಿವ್ಯಕ್ತಗೊಳ್ಳುತ್ತದೆ. ಕೆಲವೊಂದು ಪ್ರತಿಗಳ ಪುಟಗಳಲ್ಲಿ ಎಲೆ, ಹೂ, ಬಳ್ಳಿಗಳು ಮತ್ತು ಕೆಲವಲ್ಲಿ ಆಯಾ ಧರ್ಮದ ಸಾಮಾನ್ಯ ಚಿತ್ರಗಳು ಕಂಡುಬರುತ್ತವೆ. ಶೈವ ಹಸ್ತಪ್ರತಿಗಳಲ್ಲಿ ಶಿವಲಿಂಗ, ಶಿವ-ಪಾರ್ವತಿ ಮತ್ತು ಬಸವನ ಚಿತ್ರಗಳಿದ್ದರೆ ವೈಷ್ಣವ ಹಸ್ತಪ್ರತಿಗಳಲ್ಲಿ ಗರುಡ, ವಿಷ್ಣು ಮತ್ತು ಅವನ ಶಂಖಚಕ್ರ ಹತ್ತು ಅವತಾರಗಳು ಮತು ಕೆಲವೆಡೆ ಸೂರ್ಯ ಚಂದ್ರರಿರುವುದನ್ನು ಕಾಣಬಹುದು. ಉದಾಹರಣೆ: ವೈಧಿಕ ಲಿಪಿಕಾರನಾದ ಅಲಿಗೆ ಪುಟ್ಟೈಯ್ಯ ನಾಯ್ಕರ ಪ್ರತಿಗಳಲ್ಲಿ ಕಾಣಬಹುದಾಗಿದೆ. ಅಲಿಗೆ ತಿಮ್ಮೈಯ್ಯನಾಯ್ಕ ಎಂಬ ಪ್ರತಿಕಾರನು ದಾಸ ಸಾಹಿತ್ಯ ವಚನ ಸಾಹಿತ್ಯದ ಬಗ್ಗೆ ಆಸಕ್ತಿವುಳ್ಳವನಾಗಿದ್ದು ಕೀರ್ತನೆಗಳ ವಿಶೇಷ ರಾಗತಾಳಗಳನ್ನು ತಿಳಿಯುವ ಸಂಗೀತ ಜ್ಞಾನಿಯೂ, ಚಿತ್ರಕಲಾವಿದನೂ ಆಗಿದ್ದನು ಎಂಬುದು ಅವನ ಪ್ರತಿಯಿಂದ ಸ್ಪಷ್ಠವಾಗಿ ತಿಳಿದು ಬರುತ್ತದೆ.

"ಕನ್ನಡ ಭಾಷೆ ಸದಾ ಹರಿಯುವ ನೀರಿನಂತಾದುದಕ್ಕೆ ಪ್ರತಿಕಾರರ ಶ್ರಮ, ಸೃಜನಶೀಲತೆ ಕಾರಣವಾಗಿ ಅವರು ಮೂಲ ಕವಿಯ ಹಿಂಬಾಲಕರಾಗದೆ ಭಾಷಿಕ ಸಂಕಥನಕಾರರಾಗಿ ನಮ್ಮ ನುಡಿಗೆ ನಿರಂತರ ಚಲನ ಶೀಲತೆಯನ್ನು ತಂದು ಕೊಟ್ಟದ್ದು ದೊಡ್ಡ ಕ್ರಾಂತಿಯೇ ಸರಿ. ಒಂದರ್ಥದಲ್ಲಿ ಹಸ್ತಪ್ರತಿಗಳ ಅಧ್ಯಯನವೆಂದರೆ ಪ್ರಾಚೀನ ಲಿಪಿಕಾರರ ಮತ್ತು ಲಿಪಿಗಳ ಸಾಂಸ್ಕೃತಿಕ ಅಧ್ಯಯನವೇ ಆಗಿದೆ"ಯೆಂಬ ಡಾ॥ ವೀರೇಶ ಬಡಿಗೇರರ ಮಾತು ನಿಜಕ್ಕೂ ಸತ್ಯವೆನಿಸುತ್ತದೆ.

ಅಕ್ಷರಗಳನ್ನು 'ಅಕ್ಷರಮೂರ್ತಿ' ಯನ್ನಾಗಿ ಭಾವಿಸಿದ ಲಿಪಿಕಾರರ ಭಾವನೆ ಅನನ್ಯವಾದುದು. ಇಂತಹ ಕಲಾ ಪ್ರಜ್ಞೆಯುಳ್ಳ ದಾತೃಗಳು ಲಿಪಿಕಾರರಿದ್ದುದರಿಂದಲೇ ಕನ್ನಡ ಓಲೆಗರಿ ಅಲ್ಲದೆ ಈ ಹಸ್ತಪ್ರತಿಗಳ ವಿಕಾಸ ಪೂರ್ಣವಾದ ಬೆಳವಣಿಗೆ ಒಂದು ದೃಷ್ಠಿಯಲ್ಲಿ ಕನ್ನಡಿಗರ ಕಲಾ ಪ್ರಜ್ಞೆ ಕಲಾಭಿವ್ಯಚಿಗಳ ವಿಕಾಸದ ಇತಿಹಾಸವೇ ಆಗಬಹುದು. ೧

## ಆ) ಲಿಪಿಕಾರರ ಜಾತಿ, ಧರ್ಮ ಮತ್ತು ಸಾಮಾಜಿಕತೆ

ಬಿ.ಎಂ.ಶ್ರೀ ಪ್ರತಿಷ್ಠಾನದ ಸಂಗ್ರಹದಲ್ಲಿರುವ ಹಸ್ತಪ್ರತಿಗಳು ಲಿಪಿಕಾರರ ಒಟ್ಟು ಸಮಾಜ ಜೀವನದ ಅಧ್ಯಯನಕ್ಕೆ ಅತ್ಯುತ್ತಮ ಆಕರಗಳೆನಿಸಿವೆ ಅಲ್ಲದೆ ಲಿಪಿಕಾರರ ಧರ್ಮ ಮತ್ತು ಮತೀಯ ದೃಷ್ಠಿ-ನಿಷ್ಠೆಗಳು ಭಾಷೆ, ಸಾಹಿತ್ಯ, ಮೊದಲಾದ ಸಮಜೋ ಸಾಂಸ್ಕೃತಿಕ ವಿಚಾರಗಳ ಅಧ್ಯಯನಕ್ಕೆ ಪೂರಕವೆನಿಸಿವೆ.

ಲಿಪಿಕಾರರ ಸ್ವಭಾವ ಮತ್ತು ಅವರಲ್ಲಿ ಕಂಡುಬರುವ ಮೂಡನಂಬಿಕೆಗಳು, ಆಚರಣೆಗಳು ಮೊದಲಾದ ಸಾಮಾಜಿಕ ಮೌಲ್ಯಗಳನ್ನು ಅಧ್ಯಯನ ಮಾಡಬಹುದಾಗಿದೆ.

"ಲಿಪಿಕಾರರ ಮನೆತನಗಳು ಮಠ-ಮಂದಿರಗಳು, ವೃತ್ತಿ ವ್ಯವಹಾರಗಳು ಕಂಡುಬರುತ್ತವೆ. ಒಂದು ಕಾಲಕ್ಕೆ ಹಸ್ತಪ್ರತಿಗಳಲ್ಲಿ ಉಲ್ಲೇಖಿತಗೊಂಡಂತಹ ಮನೆತನಗಳು ಈಗಲೂ ಅಸ್ತಿತ್ವದಲ್ಲಿರುವುದು ಸಮಾಧಾನಕರ ಸಂಗತಿಯೆನಿಸಿದರೂ, ಕೆಲವು ಮನೆತನಗಳು ಮಠ-ಮಂದಿರಗಳು ನಾಶವಾಗಿ ಹೋಗಿರುವುದು ವಿಷಾದನೀಯ ಸಂಗತಿಯನಿಸಿದರೂ ಬಿಟ್ಟು ಹೋದ ಇತಿಹಾಸವನ್ನು ಕಟ್ಟಲು ಸಂಶೋಧಕರಿಗೆ ಲಿಪಿಕಾರರ ಉಲ್ಲೇಖಗಳು ನೆರವಿಗೆ ಬರುತ್ತವೆ" ೨

ಬಿ.ಎಂ.ಶ್ರೀ ಪ್ರತಿಷ್ಠಾನದ ಸಂಗ್ರಹದಲ್ಲಿರುವ ಹಸ್ತಪ್ರತಿಗಳಲ್ಲಿ ಲಿಖಿತವಾಗಿರುವ ಭಾಷೆಯ ಸ್ವರೂಪ ಪ್ರತಿಯಾದ ಕಾಲ, ಪ್ರದೇಶ ಮತ್ತು ಪ್ರತಿ ಆ ಸಮಾಜದಲ್ಲಿ ಯಾವ ಜಾತಿ ಶ್ರೇಣಿಗೆ ಸೇರಿದ ವ್ಯಕ್ತಿಯಿಂದ ನಕಲುಗೊಂಡಿದೆ ಎಂಬುದರ ಮೇಲೆ ನಿರ್ಧರಿಸಬಹುದು.

ಈ ಸಮಾಜದಲ್ಲಿ ಭೂಮಿಯನ್ನು ಒಬ್ಬರು ಮತ್ತೊಬ್ಬರಿಗೆ ಮಾರಾಟ ಮಾಡವುದು ಸಹಜ, ಯಾರು ಯಾರಿಗೆ ಯಾವಾಗ ಎಷ್ಟಕ್ಕೆ ಮತ್ತು ಇದರ ಕ್ರಯಕ್ಕೆ ಸಾಕ್ಷಿಗಳ ಹೆಸರನ್ನು ಸಹ ಗೋಪಾಲಯ್ಯ ಎಂಬ ಪ್ರತಿಕಾರ ಲಿಪಿಕರಿಸಿದ್ದಾನೆ.

ಬಿ.ಎಂ.ಶ್ರೀ ಪ್ರತಿಷ್ಠಾನ ಸಂಗ್ರಹದ ಹಸ್ತಪ್ರತಿ ಲಿಪಿಕಾರರಲ್ಲಿ ವಿನಯಿಗಳಿರುವುದು ಸಹಜ ಅವರು ಪ್ರತಿಯಲ್ಲಿ ಮಾಡಿರುವ ತಪ್ಪುಗಳನ್ನು "ಅಲ್ಪಜ್ಞಾನಿ ಬರೆದಿದ್ದೇನೆ ತಪ್ಪಿದ್ದರೆ ಏನೋ ತಿಳಿದಂತ ವಿದ್ವಾಂಸ ಪಂಡಿತರು ಮನ್ನಿಸಬೇಕು" ಎಂದು ಹೇಳುವಲ್ಲಿ ಲಿಪಿಕಾರರ ಸಾಮಾಜಿಕ ಕಳಕಳಿ ಅಭಿವ್ಯಕ್ತಗೊಳ್ಳುತ್ತದೆ.

ಕನಕದಾಸರು ಭಾಮಿನಿ ಷಟ್ಪದಿಯಲ್ಲಿ ರಚಿಸಿದಂತಹ ನಳದಮಯಂತಿಯರ ಕಥೆಯನ್ನು ಪ್ರತಿಮಾಡಿದ 'ಹಾಲು ಮಥದ ಚಲುಡೈಯ' ತಾನು 'ಹಾಲುಮಥ' ದವನು ಎಂದು ತಿಳಿಸಿದ್ದಾನೆ ಅಂದರೆ ಕುರುಬ ಪಂಗಡಕ್ಕೆ ಸೇರಿದವನು. ಈ ಪ್ರತಿಕಾರನು ೧೮೪೪ರಲ್ಲಿ ಉಪಾದ್ಯಾಯನಾಗಿದ್ದನೆಂಬುದು ತಿಳಿದು ಬರುತ್ತದೆ ೩ ಹಾಗೆ ಎ.ವಿ.ರಾಮಯ್ಯ ಎಂಬ ಪ್ರತಿಕಾರನು ಮದುವೆ ಪತಿ ಪತ್ನಿಯರ ನಡವಳಿಕೆ ಹಾಗೂ ಅವರ ಸಾಮಾಜಿಕ ಹೊಣೆಗಳನ್ನು ತಿಳಿಸಿದ್ದಾರೆ.

### ಇ) ಲಿಪಿಯ ಕಾರಣಗಳು ಮತ್ತು ಪರಿಣಾಮಗಳು:-

ಕಾಲದಿಂದ ಕಾಲಕ್ಕೆ ಭಾಷಾ ಮಾಧ್ಯಮದಲ್ಲಿ ಲಿಪಿಯ ಬದಲಾವಣೆಯಾಗುತ್ತಾ ಹಲವು ದೋಷಕ್ಕೆ ಕಾರಣವಾಗಿರುವ ಬದಲಾವಣೆ ಕಂಡು ಬರುತ್ತದೆ. ಒಮ್ಮೊಮ್ಮೆ ಹಿಂದಿನ ಬರವಣಿಗೆಯೇ ಹಾಗಿದ್ದಿರಬೇಕೆಂಬ ಅನಿಸಿಕೆಯೂ ಬರುವುದು. ಲಿಪಿಕಾರರ ಲಿಪಿಕರಣಕ್ಕೆ ಹಲವು ಕಾರಣಗಳಿರುತ್ತವೆ ಮತ್ತು ಅವು ಆನೇಕ ಸಾಮಾಜಿಕ ಪರಿಣಾಮಗಳಾಗಿರುತ್ತವೆ.

ಪ್ರಾಚೀನ ಕಾಲದ ಕವಿಯ ಮೂಲ ಪ್ರತಿಯು ಕಾಲಾನಂತರದಲ್ಲಿ ಬಹಳಷ್ಟು ಜನ ಲಿಪಿಕಾರರಿಂದ ನಕಲುಗೊಳ್ಳುವಾಗ ಆಯಾ ಕಾಲದ ಪ್ರಭಾವದಿಂದಾಗಿ ಭಿನ್ನ ಭಿನ್ನ ರೀತಿಯ ಭಾಷಾ ಪ್ರಯೋಗಗಳು ಕಾಣಿಸುವುದು ಸಹಜವಾಗಿದೆ.

ಲಿಪಿಕಾರರು ಕೆಲವೊಂದು ಪ್ರತಿಗಳನ್ನು ಧಾರ್ಮಿಕ ಹಿನ್ನೆಲೆಯಲ್ಲಿ ರಚಿಸುತ್ತಾ ಅದರಲ್ಲಿ ವಿವಿಧ ವರ್ಣಚಿತ್ರ, ಶಿಲ್ಪ, ಮೊದಲಾದ ಕಲೆಗಳನ್ನು ಅದ್ಭುತವಾಗಿ ಸೆರೆಹಿಡಿದರು ಇದನ್ನು ಕಂಡ ಕೆಲವು ಪ್ರತಿಷ್ಠಿತ ಮನಸ್ಸುಗಳು ಇಂತಹ ಕಲೆಯನ್ನು ಕೀಳುಜನರ ದೈಹಿಕ ಶ್ರಮಿಕರ, ಅಸ್ಪೃಶ್ಯರ ಕಲೆ ಎಂಬುದಾಗಿ ಹೇಳಿ "ವೇದಗಳನ್ನು ಬರೆದಿಡುವವರು ನರಕಕ್ಕೆ ಹೋಗುತ್ತಾರೆ ಎಂಬ ಹುನ್ನಾರವನ್ನೆಬ್ಬಿಸಿದರು" ಇಂತಹ ಹುನ್ನಾರಕ್ಕೆ ಜಗ್ಗದೆ ಹಲವಾರು ಕೃತಿಗಳನ್ನು ಪ್ರತಿಮಾಡಿದರು ಎಂದು ಹೇಳಬಹುದು.

ಪ್ರತಿಕಾರರ ಲಿಪಿಗಳು ವೈವಿಧ್ಯಮಯವಾಗಿದ್ದು ಆಡು ಭಾಷೆಗೆ ಹತ್ತಿರವಾಗಿರುತ್ತದೆ ಇದರಿಂದ ಭಾಷಿಕ ವ್ಯತ್ಯಾಸಗಳನ್ನು ಅರಿಯಲು ಪ್ರಯೋಜನಕಾರಿಯಾಗುತ್ತವೆ. ಉದಾ:- ಕೊಂಗಾಲು ರಾಯ್ಯವನರ ಮಗ ನಾರ್ಣಪಯ್ಯ ತನ್ನ ಪ್ರತಿಯ ಹಿಂಬಾಗದಲ್ಲಿ "ಯೀ ಪುಟ ಸಿಥಿಲಾವಾದ ಕಾರಣಾ ಬಿಟ್ಟಿದ್ದೇನೇ ಯಂದರಿಉದೂ" ಎಂದು ತನ್ನ ಭಾಷೆಯಲ್ಲಿ ಹೇಳಿ ಕೊಂಡಿದ್ದಾನೆ.

"ಪ್ರತಿ ಮಾಡುವಾಗ ಲಿಪಿಕಾರನ ಸಾಮಾಜಿಕ ಚಹರೆ ಕವಿ ಕೃತಿಯ ಮೇಲೆ ಗಾಢ ಪ್ರಭಾವ ಭೀರುತ್ತದೆ. ಪ್ರತಿ ಮಾಡುವಾಗ ಲಿಪಿಕಾರನ ಆಡು ರೂಪಗಳು ಹಸ್ತಪ್ರತಿಯಲ್ಲಿದ್ದರೆ, ಅವುಗಳನ್ನು ಗಂಭೀರವಾಗಿ ತೆಗೆದುಕೊಳ್ಳಬೇಕೆ ವಿನಃ ದೋಷವೆಂದಾಗಲಿ, ವಿಕಲ್ಪವೆಂದಾಗಲಿ ತಿಳಿಯಬಾರದು ಮತ್ತು ತಿದ್ದಬಾರದು"ಳ

ಪ್ರತಿಷ್ಠಾನದ ಕೆಲವು ಲಿಪಿಕಾರರು ಅಕ್ಷರಗಳನ್ನು ಪ್ರಾರಂಭಿಸುವ ಕಲೆ ಯಂಥವರನ್ನೂ ಮಂತ್ರಮುಗ್ಧರನ್ನಾಗಿಸುತ್ತದೆ ಖಡ್ಗ, ಮತ್ಸ, ಮೂಶಿಕ ಮೊಲ ಮಿಂಚನ, ಬೀಸಣಿಕೆಯಾಕಾರದ ಲಿಪಿಯಿಂದ ಹಸ್ತಪ್ರತಿಗಳು ವರ್ಣನಾತ್ಮಕವಾಗಿ ಕಾಣುತ್ತವೆಯಾದ್ದರಿಂದ ಅನ್ಯ ಜ್ಞಾನ ಶಿಸ್ತುಗಳ ಕಡೆ ಓದುಗರನ್ನು ಸೆಳೆಯುತ್ತವೆ ಮತ್ತು ನಮ್ಮ ನಾಡಿನ ಅಕ್ಷರ ಲಿಪಿ ಸಂಸ್ಕೃತಿಯ ಒಂದು ಭಾಗವಾಗಿ ಲಿಪಿಕಾರರ ಶ್ರಮದಿಂದ ಇವುಗಳಲ್ಲಿ ಸಂರಕ್ಷಿತವಾಗಿದೆ.

"ಪ್ರತಿಕಾರರ ಲಿಪಿ ಸದಾ ಒಂದೇ ತೆರನಾಗಿರದೆ ಈ ವಿಶ್ವದ ವಿವಿಧ ನಾಗರೀಕತೆಗಳೊಂದಿಗೆ ಬೆಳವಣಿಗೆ ಹೊಂದಿ ಇಂದು ಇರುವ ಸ್ಥಿತಿಗೆ ತಲುಪಿದೆ ಕೆಲವು ಲಿಪಿಕಾರರು ಚಿತ್ರಗಳ ಮೂಖಾಂತರವೇ ತಮ್ಮ ಅಭಿಪ್ರಾಯಗಳನ್ನು ಆಲೋಚನೆಗಳನ್ನು ಮತ್ತು ದಃಖದ ಸನ್ನಿವೇಷಗಳನ್ನು ಸೆರೆಹಿಡಿದಿರುವುದು ಅವರ ಭಾವನೆಗಳಿಗೆ ಹಿಡಿದ

ಕೈಗನ್ನಡಿಗಳಾಗಿವೆ". ಎಂಬ ಡಾ॥ಬಿ.ಕೆ.ಹಿರೇಮಠರ ಮಾತು ಲಿಪಿಯ ಪರಿಣಾಮಕ್ಕೆ ದ್ಯೋತಕವಾಗಿದೆ.

ನಮ್ಮ ನಾಡಿನ ಪ್ರಾಚೀನ ಸಾಹಿತ್ಯವೆಲ್ಲವೂ ಲಿಪಿಕಾರರು ಕರುಣಿಸಿದ ಹಸ್ತ ಪ್ರತಿಗಳಲ್ಲಿದ್ದು ಇವರು ದಿನಗೂಲಿಗಾಗಿ ಗುತ್ತಿಗೆಯಾಗಿ ಲಿಪಿಕರಣ ಮಾಡುತ್ತಾ ಹಸ್ತ ಪ್ರತಿಗಳನ್ನು ಓದುತ್ತಾ ತನ್ನ ಬಾಳನ್ನು ನಡೆಸಿಕೊಂಡು ಬಂದ ಸಾಹಿತ್ಯಿಕ ಲಿಪಿಕಾರರ ಬದುಕು ಹಿಂದೆ ಚಿಂತಾಜನಕವಾಗಿತ್ತು ಎಂದು ತಿಳಿಯಬಹುದು ಏಕೆಂದರೆ ನಮ್ಮ ಸಾಹಿತ್ಯ ಅಜ್ಞಾತವಾಗಿರುತ್ತಿದ್ದುದನ್ನು ರಕ್ಷಿಸಿದರು. ಈ ಲಿಪಿಕಾರರು ಕೆಲವೊಂದು ಧಾರ್ಮಿಕ ವಿಧಿ ವಿಧಾನಗಳ ಹಿನ್ನೆಲೆಯಲ್ಲಿಯೇ ಲಿಪಿಕಾರರು ಪ್ರತಿಗಳನ್ನು ಬರೆದಿದ್ದರೂ ಅವು ಏಕ ತೆರನಾಗಿರುವುದಿಲ್ಲಾ ಕೆಲವೊಂದು ಸಂಧ'ರ್ಭಗಳಲ್ಲಿ ಮಾತ್ರ ಪ್ರಧಾನ ಸಂಸ್ಕೃತಿಯವರು ಬರೆಪಕಾರರ ಮೇಲೆ ಕೆಲವೊಂದು ಕಟ್ಟಳೆಗಳನ್ನು ಹೇರಿರಬಹುದೇ ಹೊರೆತು ಅದರ ಶೈಲಿ ವಿನ್ಯಾಸಗಳ ಬಗ್ಗೆ ತಲೆಕೆಡಿಸಿ ಕೊಳ್ಳದೆ ಇರುವುದು ಕಂಡು ಬರುತ್ತದೆ.

ಪ್ರತಿಷ್ಠಾನದ ನಂ ಓ/೪ರ 'ಚೋರ ಕಥೆ' ಯನ್ನು ಪ್ರತಿಮಾಢಿದ ಪ್ರತಿಕಾರನು ಕೃತಿಯ ಅಂತ್ಯದಲ್ಲಿ ತನ್ನ ಕೃತಿಯನ್ನು ಓದುವುದರಿಂದ ಮತ್ತು ಕೇಳುವುದರಿಂದಾಗುವ ಪ್ರಯೋಜನ ಮತ್ತು ಪರಿಣಾಮವನ್ನು ಹೀಗೆ ತಿಳಿಸುತ್ತಾನೆ.

"ಹರುಷದಿಂ ಕೇಳಿ। ಬರದೊದಿದವರ್ಗೆ ಅನವರತ ಆಯುರಾರೋಗ್ಯ ಐಶ್ವರ್ಯಮಂ ಹರನೊಲಿದು ಕರುಣಿಪನು। ಶರಧಿ ಗರಿತಾರೆ। ಹಿಮಕರ ತರಣಿಯುಳ್ಳನಕ ಸ್ಥಿರವಾದ ಕೃತಿಯಿ ಚರಿತೆ ಅಚಂದ್ರಾರ್ಕಮಾಗಿ ವಪ್ಪಿಹುದೂ॥ ಅಂತೂ ಅಧ್ಯಾಯ ೧೦ ಕಾಂ ಮಂಗಳ ಮಹಾ ಶ್ರೀ ಶ್ರೀ ಶ್ರೀ ಚೋರ ಕಥಾ ಪ್ರಸಂಗ ಸಂಪೂರ್ಣಂ॥ ಶ್ರೀ ಶ್ರೀ ಶ್ರೀ ಮಾದಿಹಳ್ಳಿ XXX ಮಟದ ಬಸವಲಿಂಗ ದೇವರ ಕುಮಾರ ದೊಡ್ಡೈಯನವರು ಸ್ವ ಹಸ್ತದಿಂದ ಬರದಂತ್ತ ಚೊರಕಥೆ॥ ಕೈ ತಪ್ಪುಗಳುಯಿದ್ದರೆ ತಿದ್ದು ಕೊಳ್ಳುವುದುಎಂದು ಹೇಳಿದ್ದಾನೆ. ೫

ಸುಬ್ರಾಯಹಂದೆ ಎಂಬಂತಹ ಪ್ರತಿಕಾರ ಲಕ್ಷ್ಮೀಶನ 'ಜೈಮಿನಿಭಾರತ'ವನ್ನು ಪ್ರತಿಮಾಡಿದ ಇದೇ ಕಟ್ಟಿನಲ್ಲಿ ಅಪೂರ್ಣ ವಾದಂತಹ ವಾಲ್ಮೀಕಿ ರಾಮಾಯಣದ ಒಂದು ಹಾಳೆ ಇದೆ ಆದರೆ ಲಿಪಿಕಾರ ಪ್ರತಿ ಅಪೂರ್ಣವಾದುದಕ್ಕೆ ಕಾರಣವನ್ನು ಹೀಗೆ ಕೊಡುತ್ತಾನೆ.

"ಈ ಪ್ರತಿಯನ್ನು ಬರೆಸಿದವರು ಮೇಲಿನ ಮನೆಯ ಅವಿಭಕ್ತ ಕುಟುಂಬದ ಹಿರಿಯರಾಗಿದ್ದ ಅಲಿಗೆ ಗಣಪೈಯನಾಕರು. ಅವರ ಹಿರಿಯ ಮಗ ತಿಮ್ಮೈಯ್ಯನಾಯಕರು ಈ ಪ್ರತಿಯು ಮುಗಿದ ಎರಡು ದಿನಗಳಲ್ಲಿ ತೀರಿಕೊಂಡರು ಅಲ್ಲದೆ ಗಣಪೈಯನಾಯಕರು ಅದರ ಮಾರನೆಯ ದಿನವೇ ಎಂದರೆ ಸೆಪ್ಟೆಂಬರ್ ೨೨, ೧೯೦೮ರಂದು ಗತಿಸಿದರು. ಆದ್ದರಿಂದ ಅದನ್ನು ಪೂರ್ಣಗೊಳಿಸದೆ ಈ ಕಟ್ಟನ್ನು ಕಗ್ಗ ಎಂಬಲ್ಲಿ ವಾಸಸ್ತರಾಗಿದ್ದ ಗಣಪೈಯನಾಯಕರ ತಮ್ಮ ಲಿಂಗಯ್ಯನಾಯ್ಕರಿಗೆ ಒಪ್ಪಿಸಿದ್ದಾರೆ ಎಂಬ ಕಾರಣಗಳನ್ನು ಅದರ ಪರಿಣಾಮವನ್ನು ತಿಳಿಸಿದ್ದಾರೆ ೬

ಪ್ರತಿಷ್ಠಾನದಲ್ಲಿರುವ ನಂ೬೭೩ ರ ಕೃಷ್ಣದೇವರಾಯ ದಿನಚರಿಯನ್ನು ರಚಿಸಿದ ಕಾರಣ ಮತ್ತು ಬಿನ್ನಹವನ್ನು ಕೃತಿಕಾರನಾದ ಮುಕ್ಕು ತಿಮ್ಮಯ್ಯ ಹೀಗೆ ಹೇಳಿಕೊಳ್ಳುತ್ತಾನೆ,

"ಕೊರವರ ಪ್ರಸಂಗ ಪ್ರತಾಪಗಳು ಯೆಲ್ಲರಿಗೂ ಯಣಿಸಲಾಯಿತು ಅದರಿಂದಾ ತಾವೂ ಕೃತಿಯ ಹೇಳಿಸಬೇಕೆಂದು ಅಪ್ಪಣೆಯನ್ನು ಕೊಟ್ಟು ಮುಕ್ಕುತಿಮ್ಮಯ್ಯ। ಮಾರ್‍ಯೆಯನವರ ಮಲ್ಲೈನವರು ಮೊದಲಾದವರನ್ನು ಕೃತಿಯ ಹೇಳಿಕೋಂಡು ಬರಹೇಳಿ ಅಪ್ಪಣೆ ಕೊಟ್ಟೆರುವುದು ಯಿಂದನವರೆಗೆ ನಡದ ಪ್ರವರ್ತಕಗಳು ಯಿಂನು ಮೇಲೆ ನಡೆದ ವರ್ತಮಾನಗಳಿಗೆ ಬಿಂನಹ ಮಾಡಿ ಕಳುಹಿಸಿನು ಚಿತ್ತಕೆ ಪರಾಮರಿಸಿಕೊಳ್ಳ ಚಿತ್ತೆಸೊದು ಇಂತಿ ಬಿನ್ನಹ" ೭

ಎಂದಿದ್ದಾನೆ ನಂತರ ಪ್ರತಿಷ್ಠಾನದ ೭೧೦ 'ನವರತ್ನಚಿಂತಾಮಣಿ' ಯನ್ನು ಲಿಖಿಸಿದ ಪ್ರತಿಕಾರ ಮೊದಲಲ್ಲಿ ಈ ಕೃತಿಯನ್ನು ಕೇಳುವ ಕ್ರಮವನ್ನು ಈ ರೀತಿಯಾಗಿ ತಿಳಿಸಿದ್ದಾನೆ.

"ಶ್ರೀ ಗುರುಬಸವಲಿಂಗಾಯನಮಃ ॥ ಶ್ರೀ ಗಣಾಧಿಪತಯೇನಮಃ ಪ್ರವುದೂತ ಸಂವತ್ಸರದ ಆಶ್ವಿಜ ಶುದ್ದ ೧ ರಲ್ಲಿ ನವರತ್ನಚಿಂತಾಮಣಿ ಕೇಳುವ ಕ್ರಮ ಆದಿತ್ಯವಾರ ದಿವಸವೊಂಬತ್ತು ಕವಡೆಯನ್ನು XX ಕ್ಷೀರದಲ್ಲಿ ತೊಳೆದು XXX ನೀರಿನಲ್ಲಿ ತೊಳೆದು ಯಡೆವಣೆಯ ಮೇಲೆ ಮಡಿವಸ್ತ್ರ ಹಾಸಿ ಚಿಂತಾಮಣಿ ಪುಸ್ತಕಕವಡೆಯನ್ನು ಸಹ ಪೂಜೆಂನ್ನು ಮಾಡಿ" ಎಂದು ಹೇಳಿ ಕೊನೆಯಲ್ಲಿ

" ಯಿ ಪ್ರಮದೂತ ಸಂವತ್ಸರದ ಆಶ್ವಿಜ ಶುದ್ದ ೧೦ ಮಂಗಳವಾರತ್ರದಲ್ಲು ತವರತ್ನ ಚಿಂತ್ತಮಣಿ ಪುಸ್ತಕವನ್ನು ಶಿವಮೊಗ್ಗ ತಾಲ್ಲೂಕು ಬಿದ್ರಿ ಮಾಗಣಿ ಸೌಲೆಬ್ಯಪುರದಲ್ಲಿರುವ ಸಾವಳಿ ಮಠದ ಬಳಿಯ ಅೃನಹಳ್ಳಿ ಸಾವಳಿಗನು ಕರ್ತುಗಳಾಡ ಶೀವಲಿಂಗಪ್ಪೆಯ ಕುಮಾರನಾದ ಗುರುಶಥ್ಯೆಯ್ಯನವರ ನೌಲವನದೇವಸ್ಥಾನದಲ್ಲಿ ಸಮರ್ಪಣೆಯಾಯಿತು"॥ ಎಂದು ಹೇಳಲಾಗಿದೆ.

ಹೀಗೆ ಹಸ್ತಪ್ರತಿಗಳು ತಮ್ಮಗೆ ತಾವೇ ತಮ್ಮಲ್ಲಡಗಿರುವ ಸಾಮಾಜಿಕ ಸಾಂಸ್ಕೃತಿಕ ಸಂಗತಿಗಳನ್ನು ತೆರೆದಿಡುತ್ತವೆ. ಲಿಪಿಕಾರರ ಕೈಬರಹಗಳನ್ನು (ಕಾಲೋಪಿನ್ಸ್) ಅಧ್ಯಯನಕ್ಕೊಳಪಡಿಸಿದರೆ ಸಾಕು ನಮ್ಮ ಪ್ರಾಚೀನರ ಲಿಪಿಕಾಯಕದ ಹಿಂದೆಯೂ ಏನೆಲ್ಲ ಸಾಮಾಜಿಕ ಸಾಂಸ್ಕೃತಿಕ ಸಂಗತಿಗಳು ಅಡಗಿದ್ದವೆಂಬುದು ಅರಿವಾಗುತ್ತದೆ.

ಬಿ.ಎಂ.ಶ್ರೀ.ಪ್ರತಿಷ್ಠಾನದ ಹಸ್ತಪ್ರತಿಗಳಲ್ಲಿರುವ ಈ ವೈವಿದ್ಯತೆಯೂ ಎಲ್ಲ ಸಂಸ್ಥೆಗಳ ಹಸ್ತಪ್ರತಿಗಳಲ್ಲೂ ಕಾಣಸಿಗುತ್ತವೆನ್ನಬಹುದು.

ಒಟ್ಟಾರೆ ಬಿ.ಎಂ.ಶ್ರೀ.ಪ್ರತಿಷ್ಠಾನದ ಹಸ್ತಪ್ರತಿ ಲಿಪಿಕಾರರಲ್ಲಿ ವೈವಿಧ್ಯತೆಯಿದ್ದು ಅವರ ಬರಹಗಳಿಂದ ಆಯಾಕಾಲದ ಸಾಂಸ್ಕೃತಿಕ - ಸಾಮಾಜಿಕ ಸಂಗತಿಗಳು ಹೊರಹೊಮ್ಮಿದ್ದು ಅವುಗಳನ್ನು ಇನ್ನಷ್ಟು ಗಂಭೀರ ಅಧ್ಯಯನಕ್ಕೆ ಒಳಪಡಿಸಿದಲ್ಲಿ ಇನ್ನೂ ಹೆಚ್ಚಿನ ಸಂಗತಿಗಳು ಹೊರಬಂದಾವು ಎನ್ನಬಹುದು.

---

## ಅಡಿಟಿಪ್ಪಣಿ

೧. ಡಾ.ಬಿ.ಕೆ.ಹಿರೇಮಠ : ಹರತಿಸಿರಿ (ಕನ್ನಡ ಓಲೆಗರಿ ಗ್ರಂಥಗಳಲ್ಲಿ ಕಲಾತ್ಮಕತೆ), ವಾಲ್ಮಿಕಿ ಸಾಹಿತ್ಯ ಸಂಪದ, ಹರ್ತಿಕೋಟೆ, ಚಿತ್ರದುರ್ಗ. ಪುಟ-೨೪೪-೧೯೮೭

೨. ಡಾ॥ ಎಫ್.ಟಿ.ಹಳ್ಳಿಕೇರಿ ಹಸ್ತಪ್ರತಿ ಅಧ್ಯಯನ : ಹಂಪಿ ಕನ್ನಡ ವಿಶ್ವವಿದ್ಯಾನಿಲಯ ಸಂ-೩ ಸಂ-೨ ಪುಟ-೩೦- ೨೦೦೬

೩. ಎ.ಆರ್.ಗುರು : ಅಲಿಗೆ ಕೆಳಗಣ ಮನೆಯ ಹಸ್ತಪ್ರತಿಗಳು, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಪುಟ-೩೦ - ೨೦೦೨

೪. ಡಾ॥ ಎಸ್.ಎಸ್.ಅಂಗಡಿ : ಹಸ್ತಪ್ರತಿ ಅಧ್ಯಯನದ ಹೊಸ ಸಾಧ್ಯತೆಗಳು, ಹಂಪಿ ಕನ್ನಡ ವಿಶ್ವವಿದ್ಯಾನಿಲಯ. ಪುಟ-೧೧೭ - ೨೦೦೩

೫. ಕೆಳದಿ ಗುಂಡಾ ಜೋಯಿಸ್ ಮತ್ತು ಡಾ.ನಾಗೀತಾಚಾರ್ಯ ಬಿ.ಎಂ.ಶ್ರೀ.ಪ್ರತಿಷ್ಠಾನದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಸಂ-೧ ಪುಟ-೪೩ -೧೯೮೭

೬. ಎ.ಆರ್.ಗುರು : ಅಲಿಗೆ ಮೇಲಿನ ಮನೆಯ ಹಸ್ತಪ್ರತಿಗಳು, ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ. ಪುಟ-೬೬- ೨೦೦೬

೭. ಕೆಳದಿ ಗುಂಡಾ ಜೋಯಿಸ್ ಮತ್ತು ಡಾ.ನಾಗೀತಾಚಾರ್ಯ ಬಿ.ಎಂ.ಶ್ರೀ.ಪ್ರತಿಷ್ಠಾನದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಸಂ-೧ ಪುಟ-೩೪ -೧೯೮೭

೮. ಕೆಳದಿ ಗುಂಡಾ ಜೋಯಿಸ್ ಮತ್ತು ಡಾ.ನಾಗೀತಾಚಾರ್ಯ ಬಿ.ಎಂ.ಶ್ರೀ.ಪ್ರತಿಷ್ಠಾನದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಸಂ-೧ ಪುಟ-೫೪ - ೧೯೮೭

## ಉಪಸಂಹಾರ

ಕವಿಯ ಮೂಲ ಪ್ರತಿ ಒಂದು ದೊಡ್ಡ ಆಲದ ಮರದ ಬುಡವಾದರೆ ಇದರಿಂದ ಹಲವಾರು ಕವಲುಗಳನ್ನು ಹೊಡೆಸಿ ಇಡೀ ಕನ್ನಡದ ನೆಲಕ್ಕೆ ಬೇರು ಬಿಡುವಂತೆ ಮಾಡಿದ ಬಿ.ಎಂ.ಶ್ರೀ.ಪ್ರತಿಷ್ಠಾನದ ಹಸ್ತಪ್ರತಿಲಿಪಿಕಾರರು ನಮ್ಮ ನಾಡ ಭಾಷೆ ಮತ್ತು ಸಾಹಿತ್ಯ ಚರಿತ್ರೆಯನ್ನು ಕಟ್ಟಿಕೊಳ್ಳುವಲ್ಲಿ ಪ್ರೇರಕ ಶಕ್ತಿಯಾಗಿದ್ದಾರೆ.

'ನಮ್ಮ ಪ್ರಾಚೀನ ಪರಂಪರೆಯನ್ನು ತೌಲನಿಕ ದಾರ್ಶನಿಕ, ಮತ್ತು ಬೌದ್ಧಿಕ ಅಧ್ಯಯನಗಳ ಅಡಿಯಲ್ಲಿ ಚರ್ಚಿಸುತ್ತಾ ಲಿಪಿಕಾರರು ಬಿಟ್ಟ ಆಸ್ತಿಯನ್ನು ಪುನಾರಚಿಸಬೇಕಾಗುತ್ತದೆ'. ಎಂಬ ಹಲವಾರು ವಿದ್ವಾಂಸರ ಮಾತಿನಂತೆ ಹಸ್ತಪ್ರತಿಗಳಲ್ಲಿ ಲಿಪಿಕಾರರ ಜೀವನ ಸಂಗತಿಗಳು ಅಡಗಿಕುಳಿತಿವೆ.

ಗ್ರಾಮೀಣ ಸಂಸ್ಕೃತಿ ವಿವರಗಳಿಗೆ ಹೆಚ್ಚು ಪ್ರಾಮುಖ್ಯತೆಯನ್ನು ನೀಡಿರುವ ಲಿಪಿಕಾರರು ತಮ್ಮ ತಮ್ಮ ಹಸ್ತಪ್ರತಿಗಳಲ್ಲಿ ಧಾರ್ಮಿಕ ಸಂಪ್ರದಾಯಗಳನ್ನು ಆಚರಣೆಗಳನ್ನು ಅತ್ಯಂತ ಭಕ್ತಿಯಿಂದ ಪ್ರಸ್ತಾಪಿಸಿದ್ದಾರೆ ಇಂತಹ ಸಾಂಸ್ಕೃತಿಕ ವಿಶೇಷತೆಯನ್ನು ಹೊಂದಿರುವ ಲಿಪಿಕಾರರ ಮಹತ್ವವನ್ನು ಇಂದು ಇಡೀ ರಾಜ್ಯದಾದ್ಯಂತ ಅನ್ವಯಿಕ ವಿಶ್ಲೇಷಣೆ ಮಾಡಬೇಕಾಗಿದೆ.

ಆದರೆ ಇಂತಹ ಕಾರ್ಯವನ್ನು ಸರ್ಕಾರವೇ ಮಾಡಬೇಕಾಗಿದೆ ಡಿ.ಎಲ್.ನರಸಿಂಹಚಾರ್ಯರ ಮಾತಿನಲ್ಲಿ ಹೇಳುವುದಾದರೆ " ಪ್ರಾಚೀನ ಶೀಲ್ಪ ಕೃತಿಗಳಾದ ದೇವಾಲಯಗಳೇ ಮುಂತಾದುವುಗಳ ಸಂರಕ್ಷಣೆಗಾಗಿ ಸರ್ಕಾರ ಕೆಲವು ಖಾಯ್ದೆಗಳನ್ನು ರಚಿಸಿ ಜಾರಿಗೆ ತಂದಿರುವ ಹಾಗೆ ಪ್ರಾಚೀನ ಹಸ್ತಪ್ರತಿಗಳು ಅವು ಎಲ್ಲಿಯೇ ಇರಲಿ ಯಾರಿಗೇ ಸೇರಿರಲಿ, ಅವೆಲ್ಲ ಸರ್ಕಾರದ ಸ್ವತ್ತೆಂದು ಅವುಗಳನ್ನು ಸರ್ಕಾರಕ್ಕೆ ತಂದೊಪ್ಪಿಸಿದವರಿಗೆ ಏನಾದರೂ ಸೂಕ್ತವಾದ ಬಹುಮಾನಗಳನ್ನು ಕೊಡಲಾಗುವುದೆಂದೂ ಘೋಷಣೆಯನ್ನು ಹೊರಡಿಸಿ ಸರ್ಕಾರ ಕಾಯಿದೆಯನ್ನು ಮಾಡಿದರೆ ಹಸ್ತಪ್ರತಿಗಳ ಸಂಗ್ರಹಣೆ ಸುಲಭವಾಗಿ ನಡೆಯಬಹುದೆಂದು ತೋರುತ್ತದೆ, ಈ ವಿಷಯವನ್ನು ಪ್ರಜಾಪ್ರತಿನಿಧಿಗಳಾದ ಶಾಸನ ಸಭಾ ಸದಸ್ಯರು ಆಸಕ್ತಿವಯಿಸಿ ಪರಿಶೀಲಿಸಬೇಕು" ಆಗಮಾತ್ರ ಮೇಲಿನ ಎಲ್ಲಾ ಕಾರ್ಯಗಳ ಜೊತೆಗೆ ದೇಶದ ನಾಡಿನ ಚಿತ್ರಕಲಾ ಪರಂಪರೆಯನ್ನು, ಐತಿಹಾಸಿಕ ವ್ಯಕ್ತಿಗಳ ಸ್ವರೂಪವನ್ನು ಅರಿಯಲು ಹಸ್ತಪ್ರತಿಗಳು ಪ್ರಮುಖ ಆಕರಗಳಾಗುತ್ತವೆ. ಇದೇ ಅಭಿಪ್ರಾಯಗಳನ್ನು ಈಚಿನ ವಿದ್ವಾಂಸರೆಲ್ಲರೂ ಅಭಿವ್ಯಕ್ತಿಸಿದ್ದರಾದರೂ ಫಲಿತಾಂಶ ಆಶಾದಾಯಕವಾಗಿಲ್ಲದಿರುವುದು ವಿಷಾದನೀಯವಾಗಿದೆ.

ನಮ್ಮ ನಾಡಿನಲ್ಲಿ ಇರುವ ವಿವಿಧ ಸಂಘ ಸಂಸ್ಥೆಗಳು ಹೊರತಂದಿರುವ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿಗಳಲ್ಲಿನ ಲಿಪಿಕಾರ ಪ್ರಶಸ್ತಿಗಳನ್ನು, ಪುಷ್ಪಿಕೆಗಳನ್ನು ಮತ್ತೆ ಮತ್ತೆ

ಅಧ್ಯಯನವನ್ನು ಮಾಡಿದಾಗ ವಿಶೇಷ ಸಂಗತಿಗಳು ಕಣ್ಣೆದುರಿಗೆ ಬಂದು ಲಿಪಿಕಾರರ ಅಧ್ಯಯನ ವ್ಯಾಪ್ತಿಯನ್ನು ಹೆಚ್ಚಿಸುತ್ತವೆ.

ಈ ನಿಟ್ಟಿನಲ್ಲಿ ಹಸ್ತಪ್ರತಿ ಕ್ಷೇತ್ರ ಕನ್ನೆ ನೆಲವಾಗಿರುವುದರಿಂದ ಇಲ್ಲಿ ನಡೆಯ ಬೇಕಾದ ಸಂಶೋಧನಾ ಕೆಲಸಗಳು ಇನ್ನೂ ಹೆಚ್ಚಿರುವುದರಿಂದ ನಮ್ಮ ಜವಾಬ್ದಾರಿಯೂ ಹೆಚ್ಚಾಗಬೇಕಾಗಿದೆ.

ಪ್ರಾಚೀನ ಕನ್ನಡ ಹಸ್ತಪ್ರತಿಗಳನ್ನು ಕಣ್ಣಾರೆ ನೋಡಿ ಅದರಲ್ಲಿರುವ ವಿಚಾರಗಳನ್ನು ಕಿವಿಯಾರೆ ಕೇಳಿದರೆ ಸಾಕು ಎಂತಹ ಕಲ್ಲು ಹೃದಯವೂ ಮಿಡಿಯುವುದು. ಏಕೆಂದರೆ ಬಿ.ಎಂ.ಶ್ರೀ.ಪ್ರತಿಷ್ಠಾನ ಪ್ರತಿಯೊಬ್ಬರ ಮನೆ ಬಾಗಿಲಿಗೂ ಹೋಗಿ ಹಸ್ತಪ್ರತಿಯ ಪ್ರದರ್ಶನ ಕಾರ್ಯವನ್ನು ಯಶಸ್ವಿಯಾಗಿ ಕೈಗೊಂಡಿರುವುದರಿಂದ ಎಂದರೂ ತಪ್ಪಾಗಲಾರದು. ಪ್ರತಿಷ್ಠಾನದ ಅಭಿಪ್ರಾಯ ಸಂಗ್ರಹ ಪುಸ್ತಕದಲ್ಲಿ ಇದಕ್ಕೆ ಹಲವು ನಿದರ್ಶನದ ಉದಾಹರಣೆಗಳು ದೊರೆಯುತ್ತವೆ.

ಬಿ.ಎಂ.ಶ್ರೀ.ಪ್ರತಿಷ್ಠಾನದ ಸಂಗ್ರಹದಲ್ಲಿರುವ ಹಸ್ತಪ್ರತಿಗಳು ಹಲವಾರು ಪ್ರತಿಕಾರರ ಶ್ರಮದ ಮೂಲಕ ಹೊರಬಂದವುಗಳಾಗಿವೆ. ಗಜಶಾಸ್ತ್ರ, ಹಯಶಾಸ್ತ್ರ , ಕಾಮಶಾಸ್ತ್ರ, ಪಶುವೈದ್ಯಶಾಸ್ತ್ರ ಮತ್ತು ಸಕಲರೋಗಗಳಿಗೂ ನಿವಾರಕ ಮಾಹಿತಿಗಳ ದೀಪಿಕೆಗಳಂತಹ ಶಾಸ್ತ್ರಗಳ ಹಸ್ತಪ್ರತಿಗಳು ಆನೇಕವಿದ್ದು ಅವನ್ನು ವಿಶ್ಲೇಷಿಸಿ ಸಾರವನ್ನು ಬೆಳಕಿಗೆ ತಂದಿದೆ.

ಜೈನ, ಬೌದ್ಧ, ವಿರಶೈವ, ವೈದಿಕ ಕಥಾ ಸಾಹಿತ್ಯದ ಹಂದರಗಳ ವಿವಿಧ ಸ್ವರೂಪ ಮೊದಲಾದ ವಿಚಾರಗಳನ್ನು ಹಸ್ತಪ್ರತಿಗಳಿಂದ ಸಂಗ್ರಹಿಸಿ ಅವುಗಳ ಬಗ್ಗೆ ವಿಶೇಷ ಉಪನ್ಯಾಸ ವಿಚಾರಗೊಷ್ಠಿಗಳನ್ನೇರ್ಪಡಿಸುವರ ಮೂಲಕ ಬಿ.ಎಂ.ಶ್ರೀ. ಪ್ರತಿಷ್ಠಾನವು ಕಾಲಗರ್ಭದ ಕತ್ತಲಲ್ಲಿ ಕಣ್ಣು ಮುಚ್ಚಿ ಕುಳಿತಿರುವ ಅಜ್ಞಾತ ಸಾಹಿತ್ಯವನ್ನು ಬೆಳಕಿಗೆ ತರುವಲ್ಲಿ ಪ್ರಯತ್ನಗಳನ್ನು ಮಾಡುತ್ತಿದೆ. ಇದು ಅನುಕರಣೀಯವಾಗಿದೆ ನಿಜವಾದ ಸಂಸ್ಕೃತಿ ಉಳಿವಿನ ಪ್ರಯತ್ನವಾಗಿದೆ.

ಆದರೆ ಕೆಲವೊಂದು ಸಂಘಸಂಸ್ಥೆಗಳು ಬರಿ ಪ್ರತಿಷ್ಠೆಯದ್ಯೋತಕವಾಗಿ ಹಸ್ತಪ್ರತಿಗಳನ್ನು ಸಂಗ್ರಹಿಸಿವೆ. ಕೆಲವೊಮ್ಮೆ ಅವುಗಳನ್ನು ಕಣ್ಣಾರೆ ನೋಡುವುದಕ್ಕೂ ಅವಕಾಶವನ್ನು ಕಲ್ಪಿಸದಂತಹ ಸ್ಥಿತಿಯಲ್ಲಿವೆ ಹೀಗಾಗಬಾರದು ಇಂತಹ ಮನಸ್ಸುಗಳು ಬದಲಾಗಿ ಎಲ್ಲರ ಕೈಗೆ ಸಿಗುವಂತಾಗಬೇಕು. ಬಿ.ಎಂ.ಶ್ರೀ.ಪ್ರತಿಷ್ಠಾನ ಇಂತವರಿಗೆ ಮಾದರಿಯಾಗಿ ನಿಂತಿದೆ ಇಲ್ಲಿಯನ ಸೌಹಾರ್ದತೆ ಸ್ನೇಹ ಶೀಲತೆ ಅನುಕರಣೀಯವಾಗಿದೆ ಅದರಲ್ಲೂ ನಿರ್ದೇಶಕರಾದ ಡಾ॥ ನಾ.ಗೀತಾಚಾರ್ಯರಿಗೆ ಸಹಕಾರ ಪ್ರಮುಖವಾಗಿದೆ.

ಹಸ್ತಪ್ರತಿಗಳು ನಮ್ಮ ವೈವಿಧ್ಯಮಯ ಸಂಸ್ಕೃತಿಯ ಪ್ರತಿಬಿಂಬಗಳು ಎಂಬ ವಿಚಾರವನ್ನು ಅರಿತ ಬಿ.ಎಂ.ಶ್ರೀ ಪ್ರತಿಷ್ಠಾನದ ಹೀಗಿನ ಅಧ್ಯಕ್ಷರು ಮತ್ತು ಕಾರ್ಯದರ್ಶಿಗಳು, ಸ್ವಯಂ ಸೇವಕರು ಪ್ರತಿಷ್ಠಾನದ ಹಸ್ತಪ್ರತಿಗಳನ್ನು ನಿತ್ಯಗಮನಿಸುತ್ತ,

ಸ್ವಚ್ಛಗೊಳಿಸುತ್ತ ಶಿಥಿಲಾವಸ್ಥೆಯಲ್ಲಿರುವ ಪ್ರತಿಗಳನ್ನು ಲ್ಯಾಮಿನೇಷನ್ ಮತ್ತು ಜೆರಾಕ್ಸ್ ಮಾಡಿಸುವುದರ ಮೂಲಕ ಇನ್ನೂ ಒಂದು ಹೆಜ್ಜೆ ಮುಂದೆ ಸಾಗಿ ಎಲ್ಲ ಹಸ್ತಪ್ರತಿಗಳನ್ನು ಗಣಕೀಕರಣಗೊಳಿಸುವ ಮಹದಾಶಯಗಳ್ನು ಹೊಂದಿದ್ದಾರಲ್ಲದೆ ಹಸ್ತಪ್ರತಿ ಡಿಪ್ಲೋಮ ತರಗತಿ ಮತ್ತು ಎಂಫಿಲ್, ಪಿಹೆಚ್‌ಡಿ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ನೀಡುವುದರ ಮೂಲಕ ಅವುಗಳ ಸಂಗ್ರಹ ಕಾರ್ಯ ಸಂರಕ್ಷಣೆ ಮಹತ್ವ ಓದುವ ವಿಧಾನವನ್ನು ತಿಳಿಸಿಕೊಡುವ ನಿಟ್ಟಿನತ್ತ ಸಾಗಿರುವುದು ನಿಜಕ್ಕೂ ನಮ್ಮಗೆ ಸಂತೋಷದ, ಹೆಮ್ಮೆಯ ಮತ್ತು ಮರೆಯಲಾಗದ ಕಾರ್ಯವೆನಿಸಿದೆ. ಇದರ ಪರಿಣಾಮವಾಗಿ ಪ್ರತಿಷ್ಠಾನದ ಹಸ್ತಪ್ರತಿ ಭಂಡಾರ ಅಮೂಲ್ಯ ಆಕರ ಸಂಗ್ರಹಾಲಯವಾಗಿದ್ದು ನಾಡಿನ ಸಂಸ್ಕೃತಿ ಚಿಂತಕರ ಗಮನ ಸೆಳೆದಿದೆ ಇಲ್ಲಿಯ ಹಸ್ತಪ್ರತಿಗಳು ಲಿಪಿಕಾರರು, ಸಾಹಿತ್ಯ ಶೋಧಗಳು, ನಾಡಿನ ಸಾಹಿತ್ಯವಲಯದಲ್ಲಿ ಮುಖ್ಯ ಚರ್ಚೆಗೆ ಗ್ರಾಸವಾಗುವಷ್ಟರ ಮಟ್ಟಿಗೆ ಪ್ರಾಧಾನ್ಯತೆಯನ್ನು ಪಡೆದಿದೆ.

********************

## ಅನುಬಂಧ-೧

## ಆಧಾರ ಗ್ರಂಥಗಳು

೧. ಕೆಳದಿ ಗುಂಡಾಜೋಯಿಸ್ ಮತ್ತು ಡಾ॥ ನಾ.ಗೀತಾಚಾರ್ಯ
ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನದ ಕನ್ನಡ ಹಸ್ತಪ್ರತಿಗಳ
ವರ್ಣನಾತ್ಮಕ ಸೂಚಿ ಸಂಪುಟ-೧
ಬಿ.ಎಂ.ಶ್ರೀ. ಪ್ರತಿಷ್ಠಾನ, ಬೆಂಗಳೂರು-೧೯೮೭.

೨. ಎ.ಆರ್.ಗುರು.
ಅಲಿಗೆ ಮೇಲಿನ ಮನೆಯ ಹಸ್ತಪ್ರತಿಗಳು
ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ ಬೆಂಗಳೂರು-೨೦೦೬

೩. ಎ.ಆರ್.ಗುರು.
ಅಲಿಗೆ ಕೆಳಗಣ ಮನೆಯ ಹಸ್ತಪ್ರತಿಗಳು
ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ ಬೆಂಗಳೂರು-೨೦೦೨

## ಅನುಬಂಧ-೨

### ಆಕರ ಗ್ರಂಥಗಳ ಸೂಚಿ :-

೧) ಡಿ.ಎಲ್.ನರಸಿಂಹಚಾರ್
ಕನ್ನಡ ಗ್ರಂಥಸಂಪಾದನೆ (ಕನ್ನಡ ಕವಿ ಕಾವ್ಯ ಮಾಲೆ ೧೫೨)
ಶಾರದಾ ಮಂದಿರ,
ರಾಮಯ್ಯರ್ ರಸ್ತೆ ಮೈಸೂರು-೪,
ಮೊದಲ ಮುದ್ರಣ-೧೯೬೪.

೨) ಡಾ.ವೀರೇಶ ಬಡಿಗೇರ
ಹಲಗೆ ಬಳಪ,
ಮಯಾ ಪ್ರಕಾಶನ, ಕಮಲಾಪುರ,
ಮೊದಲ ಮುದ್ರಣ-೨೦೦೫.

೩) ಡಾ.ವೀರೇಶ ಬಡಿಗೇರ
ಕನ್ನಡ ಹಸ್ತಪ್ರತಿಗಳ ಬಹು ಪಠ್ಯೀಯ ನೆಲೆಗಳು,
ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ,
ಮೊದಲ ಮುದ್ರಣ-೨೦೦೬.

೪) ಡಾ.ನಾ. ಗೀತಾಚಾರ್ಯ
ಹಸ್ತಪ್ರತಿ ಅಧ್ಯಯನ ಶಾಸ್ತ್ರ
ಎಂ.ವಿ.ಸೀ. ಜನ್ಮ ಶತಮಾನೋತ್ಸವ ಸಮಿತಿ
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ - ಬೆಂಗಳೂರು.
ಮೊದಲ ಮುದ್ರಣ - ೨೦೦೯

೫) ಡಾ.ಎಸ್.ಎಸ್.ಅಂಗಡಿ
ಕನ್ನಡ ಗ್ರಂಥಸಂಪಾದನೆ ಬಂಧ-ವಿನ್ಯಾಸ
ಕನ್ನಡ ಸಾಹಿತ್ಯ ಪರಿಷತ್ತು-ಬೆಂಗಳೂರು.
ಪ್ರಥಮ ಮುದ್ರಣ-೨೦೦೭

೬) ಎಚ್.ದೇವಿರಪ್ಪ
ಕನ್ನಡ ಹಸ್ತಪ್ರತಿಗಳ ಇತಿಹಾಸ
ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
ದ್ವಿತೀಯ ಮುದ್ರಣ-೧೯೯೯

೭) ಡಾ.ನಾ ಗೀತಾಚಾರ್ಯ
ಹಸ್ತಪ್ರತಿಶಾಸ್ತ್ರ ವಿವೇಚನೆ
ಸ್ನೇಹ ನಿಧಿ ಬಳಗ-ಬೆಂಗಳೂರು.
೨೦೦೧

೮) ಕೆಳದಿ ಗುಂಡಾ ಜೋಯಿಸ್ & ಡಾ.ನಾ.ಗೀತಾಚಾರ್ಯ
ಬಿ.ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನದ
ಕನ್ನಡ ಹಸ್ತ ಪ್ರತಿಗಳ ವರ್ಣನಾತ್ಮಕ ಸೂಚಿ, ಸಂಪುಟ-೧
ಮೊದಲ ಮುದ್ರಣ - ೧೯೮೭.

೯) ಡಾ.ಕಲ್ಬುರ್ಗಿ ಎಂ.ಎಂ.
ಕನ್ನಡ ಗ್ರಂಥಸಂಪಾದನ ಶಾಸ್ತ್ರ
ಸಮಾಜ ಪುಸ್ತಕಾಲಯ - ಧಾರವಾಡ.
೧೯೭೨

೧೦)   ಡಾ.ಬಿ.ಕೆ. ಹಿರೇಮಠ
ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ (ಪಿಹೆಚ್‌ಡಿ ಪ್ರಬಂಧ)
ವೀರಶೈವ ಅಧ್ಯಯನ ವೇದಿಕೆ ಕಸಬಾ, ಜಂಬಗಿ.
೧೯೯೨

೧೧)   ಎಸ್.ಎಂ.ಕತ್ರೆ
ಭಾರತೀಯ ಗ್ರಂಥಸಂಪಾದನ ಪರಿಚಯ
(ಅನುವಾದ ಎನ್.ಎಸ್.ಲಕ್ಷ್ಮಿನಾರಾಯಣ ಭಟ್ಟ)
ಹರ್ಷವರ್ಧನ ಪ್ರಕಾಶನ – ಬೆಂಗಳೂರು.
ಮೊದಲ ಮುದ್ರಣ – ೧೯೬೮

೧೨)   ಎ.ಆರ್.ಗುರು
ಅಲಿಗೆ ಮೇಲಿನ ಮನೆಯ ಹಸ್ತ ಪ್ರತಿಗಳು
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು.
೨೦೦೬

## ಅನುಬಂಧ-೩

### ಲೇಖನಗಳ ಸೂಚಿ

೧) ಎಂ.ವಿ.ಸೀತಾರಾಮಯ್ಯ
ಲೇ:- ಹಸ್ತಪ್ರತಿ ಶಾಸ್ತ್ರದ ಸಮಸ್ಯೆಗಳು
ಗ್ರಂ:- ಕನ್ನಡ ಹಸ್ತಪ್ರತಿ ಶಾಸ್ತ್ರ
ಇ:- ೧೯೮೨
ಪ್ರ:- ಬಿಎಂಶ್ರೀ ಪ್ರತಿಷ್ಠಾನ, ಬೆಂಗಳೂರು.

೨) ಡಾ॥ ರಂಶ್ರೀ ಮುಗಳಿ
ಲೇ॥ ಕನ್ನಡ ಸಂಶೋಧನೆಯಲ್ಲಿ ಮುಂದಿನ ಹೆಜ್ಜೆ
ಗ್ರಂ: ಕನ್ನಡ ಹಸ್ತಪ್ರತಿಶಾಸ್ತ್ರ
ಇ: ೧೯೮೩
ಪ್ರ: ಬಿಎಂಶ್ರೀ ಪ್ರತಿಷ್ಠಾನ, ಬೆಂಗಳೂರು.

೩) ಶ್ರೀ ಎಚ್ ದೇವೀರಪ್ಪ
ಲೇ॥ ಕನ್ನಡ ಹಸ್ತಪ್ರತಿಗಳ ಚರಿತ್ರೆ
ಗ್ರಂ: ಕನ್ನಡ ಹಸ್ತಪ್ರತಿ ಶಾಸ್ತ್ರ
ಇ: ೧೯೮೩
ಪ್ರ : ಬಿಎಂಶ್ರೀ ಪ್ರತಿಷ್ಠಾನ, ಬೆಂಗಳೂರು.

೪) ಡಾ. ಜಿ.ಎಸ್.ಮೋಹನ್
ಲೇ: ತೆಲುಗು ಹಸ್ತಪ್ರತಿಗಳು
ಗ್ರಂ: 'ಮಣಿಹ' (ಫಗು ಹಳಕಟ್ಟಿ ಸಂಸ್ಮರಣ ಸಂಪುಟ)
ಇ: ೧೯೮೨
ಪ್ರ: ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು.

೫)		ಜೆ.ಜೆ. ಮಂಜುನಾಥನ್
ಲೇ॥ ವೀರಶೈವ ಹಸ್ತ ಪ್ರತಿಕಾರರು
ಗ್ರಂ: ಶ್ರೀ ಸಿದ್ದಗಂಗಾಶ್ರೀ
ಇ: ೧೯೮೧
ಪ್ರ: ಬಿ.ಎಂ.ಶ್ರೀ.. ಸ್ಮಾರಕ ಪ್ರತಿಷ್ಠಾನ ಬೆಂಗಳೂರು.

೬)		ಡಾ. ಬಿ.ಕೆ ಹಿರೇಮಠ
ಲೇ॥ ಕನ್ನಡ ಓಲೆ ಗರಿ ಗ್ರಂಥಗಳಲ್ಲಿ ಕಲಾತ್ಮಕತೆ
ಗ್ರಂ: 'ಹರತಿಸಿರಿ'
ಇ: ೧೯೮೭
ಪ್ರ: ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, ಚಿತ್ರದುರ್ಗ.

೭)	ಡಾ.ಎಸ್.ಎಸ್. ಅಂಗಡಿ
ಲೇ: ಪಠ್ಯದ ಚಲನಶೀಲತೆ
ಗ್ರಂ: ಹಸ್ತಪ್ರತಿ ಅಧ್ಯಯನ ಹೊಸ ಸಾಧ್ಯತೆಗಳು
ಇ: ೨೦೦೨
ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ.

೮)	ಲೇಖಕರು : ಬಿ.ಎಸ್. ಸಣ್ಣಯ್ಯ
ಲೇಖನ : ಓಲೆ ಗ್ರಂಥಗಳು
ಪತ್ರಿಕೆ : ಪ್ರಬುದ್ಧ ಕರ್ನಾಟಕ
ಸಂಪುಟ : ೫೨ ಸಂಚಿಕೆ ೧
ಪ್ರಕಟಣೆ : ಮೈಸೂರು ವಿಶ್ವವಿದ್ಯಾಲಯ.

೯)		ಡಾ.ವೈಸಿ ಭಾನುಮತಿ
ವೈದಿಕ ಹಸ್ತ ಪ್ರತಿಗಳು ಮತ್ತು ಲಿಪಿಕಾರರು
ಹಸ್ತಪ್ರತಿ ಅಧ್ಯಯನ
ಸಂಪುಟ ೧ ಸಂಚಿಕೆ ೧
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೦) ಬಿ.ಆರ್.ಹಿರೇಮಠ
ಹಸ್ತಪ್ರತಿ ಲಿಪಿಕಾರರು
ಸಾಧನೆ
ಸಂಪುಟ ೧೨ ಸಂ-೨ ಏಪ್ರಿಲ್ ಜೂನ್-೧೯೮೩
ಬೆಂಗಳೂರು ವಿಶ್ವವಿದ್ಯಾಲಯ.

೧೧) ಡಾ. ಬಿ.ಆರ್.ಹಿರೇಮಠ
ಶ್ರೀ ಲಕ್ಷ್ಮಿ ಸೇನ ಭಟ್ಟಾರಕ ಜೈನಮಠದ ಹಸ್ತ ಪ್ರತಿ ಭಂಡಾರದ ಲಿಪಿಕಾರ
ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ
ಸಂಪುಟ ೨೯ ಸಂ ೭
ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು,

೧೨) ಸದಾನಂದ ಪಾಟೀಲ
ಹಸ್ತಪ್ರತಿಗಳು-ಪ್ರತಿಕಾರರು ಓದುಗರು,
ಒಂದು ಸ್ಥೂಲ ಪರಿಚಯ.
ಕರ್ನಾಟಕ ಭಾರತಿ
ಸಂಪುಟ ೧೮ ಸಂ-೨ ೧೮-೦೨-೧೯೮೩

೧೩) ಜೆ.ರೋಜಾ
ಮಹಿಳಾ ಹಸ್ತಪ್ರತಿ ಲಿಪಿಕಾರರು.
ಹಸ್ತಪ್ರತಿ ಅಧ್ಯಯನ,
ಸಂ-೩ ಸಂ ೨ ಜನವರಿ – ಜೂನ್ ೨೦೦೬
ಪ್ರಸಾರಾಂಗ , ಕನ್ನಡ ವಿಶ್ವವಿದ್ಯಾಲಯ ಹಂಪಿ.

೧೪) ಡಾ.ಕೆ. ರವೀಂದ್ರನಾಥ
ಬಳ್ಳಾರಿ ಜಿಲ್ಲೆಯ ಹಸ್ತಪ್ರತಿ ಲಿಪಿಕಾರರು
ಹಸ್ತಪ್ರತಿ ಅಧ್ಯಯನ
ಸಂಪುಟ ೩ ಸಂಚಿಕೆ ೨ ಜನವರಿ ಜೂನ ೨೦೦೬
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ.

೧೫) ಡಾ. ಸಿ. ನಾಗಭೂಷಣ

ಕನ್ನಡ ಹಸ್ತಪ್ರತಿಗಳ ಪುಷ್ಪಿಕೆಗಳಲ್ಲಿ ಕಂಡು ಬರುವ ಸ್ತ್ರೀಯರುಗಳ ಶಿಕ್ಷಣದ ಚಿತ್ರಣ

ಸಾಧನೆ

ಸಂ ೧೮ ಸಂಚಿಕೆ ೩-೪ ಜುಲೈ ಡಿಸೆಂಬರ್- ೧೯೮೮

ಪ್ರಸಾರಾಂಗ, ಬೆಂಗಳೂರು ವಿ.ವಿ.